'ಸಂಗಾತಿ' ಸಾಹಿತ್ಯ—1

# ಸಮಾಗಮ

(ಸಾಮಾಜಿಕ ಕಾದಂಬರಿ)



ಬರೆದವರು:

ಶ್ರೀ ಕೆ. ಮಹಾಬಲ ಭಂಡಾರಿ,

ಎಂ.ಎ., ಎಲ್.ಎಲ್.ಬಿ.,

ಕಾಸರಗೋಡು.




1953

ಪ್ರಕಾಶಕರು:

'ಸಂಗಾತಿ' ವಾರಪತ್ರಿಕೆ, ಮಂಗಳೂರು—2

# ‘ಸಂಗಾತಿ’ ಸಾಹಿತ್ಯದ ಕುರಿತು ಒಂದು ಮಾತು

ಸುಮಾರು ಐದು ವರ್ಷಗಳ ಹಿಂದೆ ನಾವು ‘ಸಂಗಾತಿ’ ಪತ್ರಿಕೆಯ ಪ್ರಕಾಶನದಲ್ಲಿ ತೊಡಗಿದಾಗ ಪತ್ರಿಕೋದ್ಯಮದೊಡನೆ ಸಾಹಿತ್ಯ ಸೇವೆಯನ್ನೂ ಕೈಗೊಳ್ಳುವ ಆವಶ್ಯಕತೆಯನ್ನು ಮನಗಂಡಿದ್ದೆವು. ಈಗತಾನೇ ಆ ಬಯಕೆಯು ಹೂಬಿಡಲಾರಂಭಿಸಿದೆಯೆಂದು ತಿಳಿಸಲು ಸಂತೋಷಪಡುತ್ತೇವೆ.

ಬೆಳೆಯುತ್ತಿರುವ ಕನ್ನಡ ಸಾಹಿತ್ಯಕ್ಕೆ ಕಾರಂತ, ಅ. ನ. ಕೃರು ಕಳೆ ಯೇರಿಸಿರುವರಾದರೂ ಇನ್ನೂ ನಮ್ಮ ಹಲವು ತರುಣ ಬರೆಹಗಾರರು, ಬೆಟ್ಟದ ಹೂವಿನಂತೆ ನಿಸರ್ಗದ ನೆರಳ ಮರೆಯಲ್ಲಿ ಹುದುಗಿದ್ದು, ಸಮಾಜದ ಸಹಕಾರ ದಿಂದ ವಿರಹಿತರಾಗಿರುವರು. ಅಂಥವರು ಮುಂದೆ ಬರಬೇಕೆಂಬ ಹಿರಿಯೇಚ್ಛೆ ಯಿಂದ ‘ಸಂಗಾತಿ’ಯು ತನ್ನ ಮೊದಲ ಕಾಣಿಕೆಯನ್ನು ತರುಣ ಲೇಖಕ ಶ್ರೀ ಮಹಾಬಲ ಭಂಡಾರಿಯವರ ಲೇಖನಿಯಿಂದ ಆಯ್ದು ಸಾಹಿತ್ಯದೇವಿಯ ಮಡಿಲಲ್ಲಿ ಮುಡಿಪಾಗಿ ಇಟ್ಟಿದೆ.

ಇದು ಶ್ರೀ ಭಂಡಾರಿಯವರ ಪ್ರಥಮ ಪ್ರಯತ್ನ; ನಮ್ಮದು ಪ್ರಥಮ ಪ್ರಕಾಶನ. ಹೀಗೆ ಪ್ರಥಮತದ ಕಾರ್ಯದಲ್ಲಿ ಲೋಪದೋಷಗಳಿಲ್ಲವೆಂದು ನಾವು ಹೇಳಲಾರೆವು. ಆದರೆ ಈ ಸಾಹಸವನ್ನು ಎಲ್ಲರೂ ಪ್ರೋತ್ಸಾಹಿಸಿ ಕನ್ನಡಕ್ಕೆ ನಾವು ಸಲ್ಲಿಸುವ ಈ ಕಿರಿಯ ಸೇವೆಯನ್ನು ಸ್ವೀಕರಿಸುವರೆಂದು ಆಶೆಯಿದೆ. ‘ಸಂಗಾತಿ’ಯ ಚಂದಾದಾರರು ನಮ್ಮ ಈ ಉದ್ಯಮದಲ್ಲಿ ನಾವು ನಿರೀಕ್ಷಿಸಿದುದಕ್ಕಿಂತಲೂ ಮಿಗಿಲಾಗಿ ಬೆಂಬಲವಿತ್ತಿದ್ದಾರೆ. ಅವರೆಲ್ಲರೂ ಈ ಪುಟ್ಟ ಕಾಣಿಕೆಯನ್ನು ಆದರದಿಂದ ಸ್ವೀಕರಿಸಿ, ಮುಂದಕ್ಕೂ ಇದೇ ರೀತಿಯ ಸಹಕಾರವನ್ನು ನೀಡುವರೆಂಬ ಭರವಸೆಯಿದೆ.

ಶ್ರೀ ಮಹಾಬಲ ಭಂಡಾರಿಯವರು ಸಕಾಲದಲ್ಲಿ ಈ ಹೊತ್ತಗೆಯನ್ನು ಬರೆದು ಪ್ರಕಾಶನಕ್ಕೆ ಒದಗಿಸಿಕೊಟ್ಟುದಕ್ಕಾಗಿ ನಾವು ಅವರಿಗೆ ಚಿರಋಣಿಗಳು. ಹೊದಿಕೆಯ ಚಿತ್ರವನ್ನು ಅಂದವಾಗಿ ಬರೆದು ಕೊಟ್ಟ ಮಂಗಳೂರಿನ ತರುಣ ಕಲಾಗಾರ ಶ್ರೀ ಜಿ. ಬಿ. ಮಹಮ್ಮದರಿಗೂ ನಾವು ಋಣಿಗಳು. ಅಂದವಾಗಿ, ತ್ವರಿತದಲ್ಲೇ ಮುದ್ರಣ ಕಾರ್ಯವನ್ನು ಸಂಪೂರ್ಣಗೊಳಿಸಿದ ಕೆನರಾ ಪ್ರೆಸ್ಸಿನ ವ್ಯವಸ್ಥಾಪಕರಿಗೂ ನಮ್ಮ ಧನ್ಯವಾದಗಳು. ಇನ್ನು, ಪ್ರಕಾಶನದ ಪ್ರತಿ ಯೊಂದು ಹೆಜ್ಜೆಯಲ್ಲೂ ಸಹಕರಿಸಿ, ಅದು ಸಾಧ್ಯವಾಗುವಂತೆ ನೆರವು ನೀಡಿದ ಗೆಳೆಯರಾದ ಶ್ರೀ ರಘು ಕುಡಲ ಮತ್ತು ಶ್ರೀ ಎಂ. ಭೋಜರಾಜ್ ಇವರಿಗೂ ನಮ್ಮ ಆತ್ಮೀಯ ವಂದನೆಗಳು.

ಮಂಗಳೂರು 2
ತಾ. 25-4-’53

—ಮ. ನವೀನ ಚಂದ್ರ,
ಸಂಪಾದಕ, ‘ಸಂಗಾತಿ’ ವಾರಪತ್ರಿಕೆ.

# ಓದುಗರೊಡನೆ ಒಂದು ಮಾತು.

---

ಪುಸ್ತಕಗಳನ್ನು ಬರೆಯುವವರಿಗೆ ಕಷ್ಟವಿದೆ ನಿಜ. ಕೆಲವು ಬಾರಿ ಬರೆದ ಪುಸ್ತಕಗಳನ್ನು ಓದುವ ಓದುಗರಿಗೂ ಕಷ್ಟ ತಪ್ಪಿದ್ದಲ್ಲ! ಪುಸ್ತಕ ಏನೇನು ರುಚಿಸದಿದ್ದರೂ ಬರೆದಾತ ತನ್ನ ಆಪ್ತನೆಂಬ ದಾಕ್ಷಿಣ್ಯಕ್ಕೆ ಬಲಿಬಿದ್ದು ಕೆಲವೊಮ್ಮೆ ಕಷ್ಟದಿಂದ ಓದಬೇಕಾಗುತ್ತದೆ. ಇನ್ನು ಕೆಲವು ಬಾರಿ ಬೆಲೆ ತೆತ್ತು ಪುಸ್ತಕ ಪಡೆದ ತಪ್ಪಿಗಾಗಿ ಓದಿಬಿಡಬೇಕಾಗುತ್ತದೆ. ಹಾಗೆಲ್ಲಾದರೂ ಈ ಕಿರು ಕಾದಂಬರಿ ಬೇಸರ ಪಡಿಸಿತಾದರೆ ಕ್ಷಮೆ ಇರಲಿ.

ಕಾದಂಬರಿಯ ಕಥಾವಸ್ತು ಕೇವಲ ಕಾಲ್ಪನಿಕ. ಅಲ್ಲಲ್ಲಿ ಬರುವ ಕೆಲವು ವ್ಯಕ್ತಿ ಚಿತ್ರಗಳು—ಸನ್ನಿವೇಶಗಳು ಮಾತ್ರ ಲೇಖಕ ಸಮಾಜದಲ್ಲಿ ಕಂಡ ಅಥವಾ ಕೇಳಿದ ನೈಜನೋಟಗಳ ತಳಹದಿಯಿಂದಲೇ ಬರೆದುದು. ನಿಷ್ಕಲಂಕ—ನಿಷ್ಕಪಟ, ಹಳ್ಳಿ ಜೀವನದಲ್ಲೂ ಅಸೂಯೆ—ಸ್ವಾರ್ಥಲಾಲಸೆ—ವೈರತ್ವಗಳ ನಿತ್ಯ ಹೋರಾಟ ತಪ್ಪಿಲ್ಲ. ಸ್ವಪ್ರತಿಷ್ಠೆ ಸಾಧಿಸಲಿಕ್ಕಾಗಿ ಬಡಜನರ ಬೇಟೆಯಾಡುವ ಅಥವಾ ವೈಯುಕ್ತಿಕ ಸೇಡು ತೀರಿಸಲಿಕ್ಕಾಗಿ ಸಾಧು ಜನರನ್ನು ಬಲಿಕೊಡುವ ರುದ್ರ ನಾಟಕಗಳು ಹಳ್ಳಿಜೀವನದ ನಿತ್ಯ ಅನುಭವಗಳು. ಕಾದಂಬರಿಯ ಕಥಾವಸ್ತು ಕೇವಲ ಕಾಲ್ಪನಿಕವಾಗಿದ್ದರೂ, ಸಂದರ್ಭ ದೊರೆತಲ್ಲೆಲ್ಲಾ ಮೇಲೆ ಹೇಳಿದ ಹಳ್ಳಿಜೀವನದ ಕೆಲವು ನೈಜ ಸನ್ನಿವೇಶಗಳನ್ನು ಚಿತ್ರಿಸಲು ಪ್ರಯತ್ನಿಸಿದ್ದೇನೆ.

ಈ ಕಾದಂಬರಿ ಬರೆಯಲು ತೊಡಗಿದ್ದು ಈಗ ಎರಡು ಮೂರು ವರ್ಷಗಳ ಹಿಂದೆ, ನಾನು ಇನ್ನೂ ವಿದ್ಯಾರ್ಥಿಯಾಗಿದ್ದಾಗಲೇ. ಬರೆದು ಮುಗಿಸಿದುದು ಮೊನ್ನೆ ಮೊನ್ನೆ. 'ಸಂಗಾತಿ'ಗಾಗಿ ಅವಸರವಾಗಿ ಬರೆದು ಮುಗಿಸಬೇಕಾಯಿತು.

'ಸಂಗಾತಿ' ಪತ್ರಿಕೆಯಲ್ಲಿ ನನಗೆ ಮೊದಲಿನಿಂದಲೂ ತುಂಬಾ ನಲ್ಮೆ. ಅದರ ಸಂಪಾದಕರು ನನ್ನ ಮೊದಲ ಕಾದಂಬರಿಯನ್ನು ಪ್ರಕಟಿಸಿ ಕನ್ನಡಿಗರ ಮುಂದಿಟ್ಟಿದ್ದಾರೆ. ಅವರಿಗೆ ನಾನು ಋಣಿ.

ಮಹಾಬಲ ಭಂಡಾರಿ.

---

ಬಿದಿಯ ಕಣ್ಣುಮುಚ್ಚಾಲೆ ಆಟ ರಾಮಣ್ಣನಿಗೆ ಮಾಟ ಮಾಡಿತು. ತಂದೆಯ ಕಳೇಬರದ ಮುಂದೆ ಕಣ್ಣುಮುಚ್ಚಿ ನಿಂತಿದ್ದಾನೆ. ಒಂದರೆ ತಾಸಿನ ಹಿಂದೆ, ಕೊನೆಯುಸಿರೆಳೆಯುವ ಮುನ್ನ ಆ ಮುದಿಯ, ಮಗನನ್ನು ಕರೆದು ಕೆನ್ನೆ ಸವರಿದ್ದ. 'ವಂಚನೆಯಿಂದ ತುಂಬಿದ ಪ್ರಪಂಚದಲ್ಲಿ ಜಾಗೃತೆಯಿಂದ ಬಾಳಪ್ಪಾ' ಎಂದು ಹರಸಿದ್ದ. ಮತ್ತೇನೋ ಹೇಳಲಿಕ್ಕಾಗಿ ಆತ ಪ್ರಯತ್ನಿಸುತ್ತಿದ್ದಾಗಲೇ ಕಂಠ ಬಿಗಿದಿತ್ತು. ಇನ್ನರೆಕ್ಷಣ ಕಳೆದರೆ ರಾಮಣ್ಣ ಆತನನ್ನು ತಂದೆಯೆನ್ನಬಾರದು. ರಾಮಣ್ಣನ ತಂದೆ ಮೃತ್ಯುವಿನ ದವಡೆಯೊಳಗಿದ್ದ!

ಆಗಲೇ ತೊಡಗಿತ್ತು ಹೆಂಗಸರ ಅಳು. ತನ್ನ ತಾಯಿ ನೀಲಿಯೆಲ್ಲಿರುವಳೆಂದು ರಾಮಣ್ಣ ದೃಷ್ಟಿ ತಿರುಗಿಸಿದ. ನೀಲಿಯೆಲ್ಲಿ? ಎಂದು ವಿಚಾರಿಸಿದ. ಆದರೆ ಯಾರು ಉತ್ತರಹೇಳಬೇಕು? ಕಣ್ಣು ತಾನೆ ಹುಡುಕಿಕೊಂಡಿತು. ತನ್ನ ಇನಿಯನ ಮೃತದೇಹ ಅಪ್ಪಿ ಅಪ್ಪಿ ಅತ್ತ ನೀಲಿ ಶಕ್ತಿತಪ್ಪಿ ಹಾಗೆಯೇ ಬಿದ್ದುಕೊಂಡಿದ್ದಳು. ಯಾರು ಯಾರನ್ನು ಸಂತೈಸಬೇಕು? ಅದೊಂದು ಬಗೆಹರಿಯದ ಒಗಟಾಯಿತು ರಾಮಣ್ಣನಿಗೆ. ತಂದೆಯ ಸಾವಿಗಾಗಿ ಕಣ್ಣು ಹನಿ ಸುರಿಸುತ್ತಲೇ ಇತ್ತು. ಅನಿವಾರ್ಯವಾಗಿ ಬರುವ ಸಾವಿಗೆ ಹುಚ್ಚನಂತೆ ಅಳಬಾರದೆಂದು ಒಮ್ಮೆ ಸುಮ್ಮನಾಗಿ ಕಣ್ಣುಜ್ಜಿಕೊಂಡನು. ಕಂಬನಿಯ ಹೊನಲು ಇನ್ನೊಮ್ಮೆ ಹರಿದು ನೆಲದಮೇಲೆ ಇಂಗಿ ಹೋಯಿತು. ಗೋಡೆಗೆ ತಲೆಯಿರಿಸಿ ರಾಮಣ್ಣ ಅಳುತ್ತಾನೆ. ಆತನ ಅಳು ಎಲ್ಲರಿಗಿಂತಲೂ ಮಿಗಿಲಾಯಿತು.

ಮೂರ್ಛೆತಿಳಿದೆದ್ದ ನೀಲಿ ಚೇತರಿಸಿಕೊಂಡು ಕುಂಟುತ್ತಾ ಬಂದು ಮಗನ ಗಲ್ಲಹಿಡಿದು ಸಂತೈಸತೊಡಗಿದಳು.

ಅರ್ಧತಾಸು ಹೀಗೆ ಕಳೆಯಿತು. ಡಾಕ್ಟರರನ್ನು ಕರೆದುಕೊಂಡು ಬರುವೆನೆಂದು ಪೇಟೆಗೋಡಿದ ಹಿರಿಯಮಗ ಮಾಧವ ಮನೆಮುಟ್ಟುವುದರೊಳಗೆ ಕೆಲಸವು ತೀರುವುದೆಂದು ಪಾಪ ಆತನೇನು ಬಲ್ಲ? ಬಂದ ಡಾಕ್ಟರರನ್ನು ಹಿಂದೆ ಕಳುಹಿಸಿ ಮಾಧವನೂ ಅಳಲು ಕುಳಿತ. ಅತ್ತು ಅತ್ತು ಬೇಸತ್ತ. ತಾಯಿಮಕ್ಕಳು ಕಣ್ಣು ತೆರೆದಾಗ ಹಳ್ಳಿಯ ಹತ್ತು ಸಮಸ್ತರು ಅಲ್ಲಿ ನೆರೆದಿದ್ದರು. ಅವರಲ್ಲಿ ಹಿರಿಯ ಯಜಮಾನ ಮುಂದೆ ಬಂದಿಳ ದು

ತಿದ್ದವರ ಮೈತಟ್ಟಿ “ಇನ್ನು ಅತ್ತುಕುಳಿತರೆ ಸತ್ತವನು ದೊರೆವನೆ? ಸಾಕು ಮಾಡಿ; ಆತ ಪುಣ್ಯವಂತ—ಹೋಗಲಿ, ವೀರಸ್ವರ್ಗ ಪಡೆಯುತ್ತಾನೆ.” ಎಂದು ಸಂತೈಸಿದ.

ಶವದ ದಹನ ಇತ್ಯಾದಿ ಕರ್ಮಗಳನ್ನು ಕತ್ತಲೆಯೇರುವ ಮೊದಲೇ ತೀರಿಸುವುದೆಂದು ಎರಡನೆಯ ಹಿರಿಯ ಸೂಚಿಸಿದುದರಿಂದ ಎಲ್ಲರೂ ಅದಕ್ಕಾಗಿ ಸನ್ನದ್ಧರಾದರು. ತನ್ನಪ್ಪನ ಒಕ್ಕಲುಗಳಲ್ಲಿ ಅತೀ ಪ್ರಾಮಾಣಿಕತೆಯುವನೂ ಅವನ ಪ್ರೀತಿಯ ಬಂಟನೂ ಆದ ಮಾರಪ್ಪ ತೀರಿದ ಸಂಗತಿ ಕೇಳಿ ಧನಿಗಳೂ ಶೀಘ್ರವಾಗಿ ಅಲ್ಲಿ ದಯಮಾಡಿಸಿದರು. ಕ್ರಿಯೆಗೆ ಬೇಕಾಗುವ ಎಲ್ಲಾ ಖರ್ಚನ್ನೂ ನೋಡಿಕೊಂಡರು.

---

## 2

ಮುಂದಿನ ಹತ್ತು ದಿನಗಳು ಆಲಸ್ಯದಿಂದಲೇ ಕಳೆದುವು. ರಾಮಣ್ಣ ನಿಗೆ ಕ್ಷಣವೊಂದು ಯುಗವಾಗಿಯೇ ತೋರಿತು. ಚೆನ್ನಾದ ಚಿಕಿತ್ಸೆ ದೊರೆಯುತಿದ್ದರೆ ಮಾರಪ್ಪ ಬದುಕಿಕೊಳ್ಳುತಿದ್ದನೆಂದು ಯಾರೋ ಹೇಳಿದ ವರದಿ ದೊರೆತಾಗ ರಾಮಣ್ಣ ಹೊಟ್ಟೆ ಹಿಸುಕಿಕೊಂಡ.

ಸಾಲೆಯಲ್ಲಿ ಉಪಾಧ್ಯಾಯರಿಂದ ತೊಡಗಿ ವಿದ್ಯಾರ್ಥಿಗಳೆಲ್ಲರೂ ರಾಮಣ್ಣನಿಗೆ ಅನುತಾಪ ತೋರಿದರು. ರಾಮಣ್ಣನಿಗೆ ಈಗ ಸಹನಾಶಕ್ತಿ ಬೇಕು. ಆತ ಕಣ್ಣೊರಸಿಕೊಂಡ. ಮನೆಗೆ ಹಿಂತಿರುಗಿದಾಗ ಅಣ್ಣ, ತಾಯಿ ಎಲ್ಲರೂ ಸ್ತಬ್ಧರಾಗಿ ಕುಳಿತಿದ್ದಾರೆ.

“ನೀನೀಗ ಯಾವ ತರಗತಿಯಲ್ಲಿರುವೆಯಾ ರಾಮಾ?” ಅಣ್ಣ ಮಾಧವನು ವಿಚಾರಿಸಿದ. ಈ ತನಕ ರಾಮುನ ಸಾಲೆಯ ಕುರಿತು ಮಾಧವನಿಗೂ ಯಾವುದೂ ತಿಳಿದಿರಲಿಲ್ಲ. ಎಲ್ಲಾ ಹೊಣೆ ಮಾರಪ್ಪನೇ ಹೊತ್ತಿದ್ದ. ಯಾವ ಬವಣೆಯನ್ನು ಎದುರಿಸಿಯಾದರೂ ರಾಮು ಮೆಟ್ರಿಕು ಪಾಸುಮಾಡುವ ತನಕ ಓದುಮುಗಿಸಬಾರದು ಎಂದು ಸಾಹಸ ತೊಟ್ಟಿದ್ದ. ಆತ ರಾಮುನಿಂದ ತುಂಬಾ ನಿರೀಕ್ಷಿಸಿದ್ದ. ಮಾರ್ಗದಲ್ಲಿ ಹೋಗುವ ಸಾಲೆಯ ಹುಡುಗರನ್ನು ಕಂಡರೆ ಮಾರಪ್ಪನಿಗೆ ಅಪಾರವಾದ ಆನಂದ. ಊರ ಹೋಟೆಲಲ್ಲಿ ಚಹಾ ಕುಡಿಯಲು ಆತ ಅಪರೂಪವಾಗಿ ಹೋದನೆಂದರೆ ತನ್ನ ಮಗನ ಸಾಲೆಯ ಕುರಿತು

ಪ್ರಶಂಸೆಯ ಮಾತು ಹೇಳಿಕೊಳ್ಳುತ್ತಿದ್ದ. ಮನೆಗೆ ನೆಂಟರು ಬಂದರೆ ಬೇಕೆಂದೇ ರಾಮನನ್ನು ಅವರ ಮುಂದೆ ಕರೆದು ಇಂಗ್ಲಿಷು ಓದಲು ಬಲವಂತ ಪಡಿಸುತ್ತಿದ್ದ. ಅಪರೂಪವಾಗಿ ಯಾರಾದರೂ ಎಲ್ಲಿಯಾದರೂ ಇಂಗ್ಲಿಷು ಮಾತನಾಡುವುದನ್ನು ಮಾರಪ್ಪ ಕೇಳಿದನೆಂದರೆ ಅದರಿಂದ ಜಾಗ್ರತೆಯಾಗಿ ಒಂದೆರಡು ಶಬ್ದಗಳನ್ನು ಹೆಕ್ಕಿ ಅದರ ಅರ್ಥವೇನೆಂದು ಮನೆಗೆ ಬಂದು ರಾಮನನ್ನು ಪ್ರಶ್ನಿಸುತ್ತಿದ್ದ. ರಾಮು ಹೇಳಿದ ಅರ್ಥ ಸರಿಯಿರಲಿ—ತಪ್ಪಿರಲಿ, ನೀಲಿಯನ್ನು ಕರೆದು ತಮ್ಮ ಮಗ ಜಾಣನೆಂದು ತಲೆದೂಗುತ್ತಿದ್ದ. ಮಗನೊಮ್ಮೆ ಇಂಗ್ಲಿಷಿನಲ್ಲಿ ಸಂಭಾಷಿಸುವ ಮೋಡಿ ನೋಡಬೇಕೆಂಬ ಆತನ ಬಯಕೆ ಮುಂದೊಂದು ದಿನ ಈಡೇರದೆ ಇರಲಿಲ್ಲ. ಪಟ್ಟಣದ ರಾಮನ ಸಹಪಾಠಿಗಳು ರಜೆದಿನ ತಿರುಗಾಡಲಿಕ್ಕಾಗಿ ರಾಮನ ಮನೆಗೆ ಬಂದಿದ್ದರು. ಅವರಲ್ಲಿ ಒಬ್ಬ ತಹಸಿಲ್ದಾರರ ಮಗನಂತೆ. ಇನ್ನೊಬ್ಬನ ತಂದೆ ಪೋಲೀಸ್ ಖಾತೆಯಲ್ಲಿ ನೌಕರರಂತೆ. ಹಾಯ್—ಇವರೆಲ್ಲರೂ ತನ್ನ ಮಗನ ಮಿತ್ರರೆಂದಾಗ ಮಾರಪ್ಪನಿಗೆ ಹಿಡಿಯದ ಹೆಮ್ಮೆ. ಊಟ ಉಪಚಾರ ವಿಜೃಂಭಣೆಯಿಂದ ಆಗಬೇಕು. ಮಾರಪ್ಪ ತನ್ನ ಹತ್ತಿರದ ಬಂಧುಗಳನ್ನು ಸಹಾಯಕ್ಕಾಗಿ ಕರಕೊಂಡನು. ಬಂದವರನ್ನು ಬೆರಳು ತೋರಿಸಿ ಅವರವರ ಯೋಗ್ಯತೆಗಳೇನೆಂದು ತನ್ನ ಬಾಂಧವರಿಗೆ ಹೇಳಿಕೊಂಡನು. ಮುಂದೊಂದು ದಿನ ತನ್ನ ರಾಮನೂ ಸರಕಾರಿ ನೌಕರನಾಗಿ ಹತ್ತು ಜನರ ಮನೆಯಲ್ಲಿ ಗೌರವಿಸಲ್ಪಡುವನೆಂದು ಕನಸುಕಂಡನು. ಅವರೊಳಗೆ ಏನು ಸಲಿಗೆ? ಏನು ಸೌಹಾರ್ದ! ಅವರೆಲ್ಲರೂ ಒಟ್ಟಾಗಿ ಏನೂ ಭೀತಿಯಿಲ್ಲದೆ ಇಂಗ್ಲಿಷಿನಲ್ಲೇ ಸಂಭಾಷಣೆ ಮಾಡುತ್ತಿದ್ದಾಗ ಮಾರಪ್ಪನಿಗೆ ಎಲ್ಲವೂ ಆಶ್ಚರ್ಯಕರವಾಗಿ ಕಂಡಿತು. ತಹಸಿಲ್ದಾರರ ಮಗ ಆ ಸೋನ್ಸ್ ಮಾರಪ್ಪನ ಅತಿಥಿ ಸತ್ಕಾರವನ್ನು ಹೊಟ್ಟೆ ತುಂಬಾ ಶ್ಲಾಘಿಸಿದುದಲ್ಲದೆ ಮಾರಪ್ಪನನ್ನು ಎರಡೂ ಕೈಗಳಿಂದ ಬಿಗಿಯಾಗಿ ಹಿಡಿದು ಅಪ್ಪಿಕೊಂಡನಂತೆ. ತನ್ನ ಮನೆಗೊಮ್ಮೆ ಮರೆಯದೆ ಬರಬೇಕೆಂದು ಮಾರಪ್ಪನನ್ನು ಆಹ್ವಾನಿಸಿದನಂತೆ. ಪೋಲೀಸ್ ಇನಸ್ಪೆಕ್ಟರರ ಮಗ ಕೊಡಗಿನ ಚಂಗಪ್ಪ ಹೊರಡುವಾಗ ಮಾರಪ್ಪನ ಕಾಲುಹಿಡಿದು ನಮಸ್ಕರಿಸಲು ಬರುವಾಗ ಅಷ್ಟು ದೊಡ್ಡ ಮಹಾನುಭಾವರ ಮಗನನ್ನು ತನ್ನ ಕಾಲುಹಿಡಿಯಲು ಬಿಡದೆ ಮಾರಪ್ಪ ದೂರಸರಿದನಂತೆ. ಆದರೆ ಆ ಕೊಡಗಿನ ಕುವರ ಹಾಗೆಯೇ ಬಿಡುವನೇ? ಮಾರಪ್ಪನನ್ನು ಬೆನ್ನಟ್ಟಿ, ಓಡಿಸಿ, ಕಾಲಿನಮೇಲೆ ಕೈಯಿಟ್ಟು ಆಶೀರ್ವಾದ

ಬೇಡಿದನಂತೆ. ಹಳ್ಳಿಯ ಬಡರೈತ ಮಾರಪ್ಪ ಈ ಅಸಾಧಾರಣ ಸನ್ನಿವೇಶವನ್ನು ನೋಡಿ ದಿಗಿಲುಗೊಂಡನಾದರೂ ಸಂತಸದ ಪರಮಾವಧಿಯಲ್ಲಿ ತಲ್ಲೀನನಾಗಿ ಆನಂದಭಾಷ್ಪದ ಹೊನಲು ಸುರಿಸಿದನು. ಅವರೆಲ್ಲಾ ಹೋದೊಡನೆ ತನ್ನ ಬಾಂಧವರೊಡನೆ ರಾಮುನಿಗಾಗಿ ಮೀಸಲಿರುವ ಉಜ್ವಲ ಭವಿತವ್ಯದ ಕುರಿತು ಅರ್ಧತಾಸು ಉಪನ್ಯಾಸವಿತ್ತನಂತೆ. ಅದೆಲ್ಲಾ ಹಿಂದಿನ ಮಾತು. ತನ್ನ ಮಗನ ಕುರಿತು ಮಾರಪ್ಪ ಕಾಣುತಿದ್ದ ಕನಸುಗಳೆಲ್ಲಾ ಆತನ ಪಾಲಿಗೆ ಕನಸುಗಳಾಗಿಯೇ ಉಳಿದುವು. ವಿಧಿಯ ಕಾಣದ ಕೈಯಾಟ ಮಾರಪ್ಪನನ್ನೂ ರಾಮುನನ್ನೂ ಪ್ರತ್ಯೇಕಿಸಿತು.

ಅಣ್ಣ ಮಾಧವ ತಮ್ಮನ ಸಾಲೆಯ ತರಗತಿ ಯಾವುದೆಂದು ಸವಾಲು ಮಾಡಿದ್ದಾನೆ. ಒಮ್ಮೆಲೇ ರಾಮುನ ಕಂಠ ಬಿಗಿದುಕೊಂಡಿತು. ತುಂಬಿದ ಕಣ್ಣಿಂದ ಕಂಬನಿ ಹೊರಸೂಸಿತು. ಮಾತನಾಡಲಿಕ್ಕಾಗಿ ರಾಮು ಪ್ರಯತ್ನಿಸಿದರೆ ಆ ಗದ್ಗದ ಕಂಠದಿಂದ ಮಾತೇ ಬರಲಾರದು. ರಾಮು ಕೊನೆಗೆ ನಾಲ್ಕು ಬೆರಳೆತ್ತಿ ಅಣ್ಣನಿಗೆ ತೋರಿಸಿದ. ಹೌದು—ಒಂದು ತಿಂಗಳು ಕಳೆದರೆ ರಾಮು ನಾಲ್ಕು ಮುಗಿಸಿ ಐದನೆಯ ಫಾರ್ಮಿನಲ್ಲಿ! ಅದರ ಮುಂದಿನ ತರಗತಿಯೇ ಮಾರಪ್ಪನ ಕನಸಿನ ಮೆಟ್ರಿಕ್. ರಾಮು ಕಣ್ಣೊರಸಿಕೊಂಡನು.

ದೀರ್ಘವಾಗಿ ಯೋಚಿಸಿ, ಮಾಧವ ನಿರಾಸೆಯ ನಿಟ್ಟುಸಿರಿಟ್ಟ. "ತಮ್ಮಾ, ದೇವರಿದ್ದಾನೆ. ಬರುವ ಸುಗ್ಗಿಯಲ್ಲಿ ಚೆನ್ನಾಗಿ ಗೈಯುವಾ" ಎನ್ನುತ್ತಾನೆ. ರಾಮುನಿಗೆ ಯಾವುದೂ ಅರ್ಥವಾಗಲಿಲ್ಲ.

"ಸಾಲೆ ಸಾಕು ಮಾಡು" ಎಂದು ಅಣ್ಣ ಅಧಿಕಾರ ವಾಣಿಯಿಂದಲೇ ನುಡಿದ.

---

## 3

ಮಾರಪ್ಪನ ಐದನೆಯ ಶ್ರಾದ್ಧವೂ* ಮುಗಿಯಿತು. ಅಬ್ಬಾ—ಐದು ವರ್ಷಗಳು ಎಷ್ಟು ಬೇಗ ಹಾರಿಹೋದುವು! ಅದು ನೀಲಿಗೆ ಆಶ್ಚರ್ಯವನ್ನುಂಟುಮಾಡದೆ ಇರಲಿಲ್ಲ.

---

* ಸತ್ತವರ ನೆನಪಿಗಾಗಿ ವಾರ್ಷಿಕ ನೋಂಪಿ.

ರಾಮನೀಗ ಸಾಲೆ ಬಿಟ್ಟಿದ್ದಾನೆ. ಬಯಲಿಗೋಡಿ ಅಣ್ಣನೊಡನೆ ದುಡಿಯುತ್ತಾನೆ. ತಾನೊಬ್ಬ ಅರಿತ ಬೇಸಾಯಗಾರನೆಂದು ಆತ ಹೆಮ್ಮೆ ಪಡಬೇಕು. ಆದರೆ ತೀರಿದ ತಂದೆ ಮಾರಪ್ಪನ ಬಯಕೆಯೇ ಬೇರೆ ಇತ್ತು. ಮಗ ಮೆಟ್ರಿಕು ಓದಿ ಮಣೆಗಾರನಾಗಿ ಬರುತಿದ್ದರೆ ಮಾರಪ್ಪ ಹಿಗ್ಗುತ್ತಿದ್ದ. ತನ್ನ ಜತೆಯ ದೊಡ್ಡ ಮನುಷ್ಯರ ಮಕ್ಕಳೊಡನೆ ರಾಮ ಇಂಗ್ಲಿಷು ಮಾತಾಡುವುದನ್ನು ನೋಡಿ ಬಾರಿ ಬಾರಿಗೂ ಸಂತಸದಿಂದ ಹಿಗ್ಗುತಿದ್ದ ಮಾರಪ್ಪ ತನ ಮಗ ತನ್ನಂತೆಯೇ ರೈತನಾಗಿ ಉಳಿದುದನ್ನು ಕಂಡರೆ ಎಷ್ಟು ದುಃಖಿಸುತಿದ್ದನೋ ಏನೋ? ತಹಸಿಲ್ದಾರರ ಮಗ ಸೋನ್ಸ್, ಪೋಲೀಸ್ ಇನೆಸ್ಪೆಕ್ಟರರ ಮಗ ಚಂಗಪ್ಪ ಇವರ ಬದಲು ತನ್ನ ಅಭಿಮಾನದ ಮಗ ರಾಮ ಹಳ್ಳಿಯ ಹಲವು ತಿಮ್ಮ—ಸುಬ್ಬರ ಗೆಳೆಯನಾಗುವನೆಂದು ಮಾರಪ್ಪ ಕನಸಿನಲ್ಲಾದರೂ ಎಣಿಸಿರ ಬಹುದೇ?

ಕಳೆದ ಸುಗ್ಗಿ ಬೆಳೆ ಚೆನ್ನಾಗಿತ್ತು. ಮನೆಗೆ ಬೇಕಾಗುವಷ್ಟು ಶೇಖರಿಸಿ ಉಳಿದ ಭತ್ತ ಮಾರಾಟವಾಯಿತು. ಎರಡು ಮುಕ್ಕಳೂ ಮಾರಿ ಸಿಕ್ಕಿದ ಹತ್ತು ಹೊನ್ನನ್ನು ಅಮ್ಮ ನೀಲಿಯ ಕೈಗಿತ್ತರು. ಮನೆಯ ಮದುವೆ ಮುಂಜಿಗಳಿಗೆ ನೆರವಾಗುವ ನಿಧಿಯದು. ರಾಮಣ್ಣ ಖಾಸಗಿಯಾಗಿ ಒಂದಿಷ್ಟು ಮೆಣಸು ಬೆಳೆಸಿದ್ದ. ಊರ ಭೂತದ ಕೋಲ* ದ ಸಮಯ ಅದು ಹಣ್ಣು ಬಿಟ್ಟಿತ್ತು. ಮಾರಿ ಸಿಕ್ಕಿದ ನಾಲ್ಕು ಹೊನ್ನು ರಾಮಣ್ಣನಿಗೆ ಸ್ವಂತ ವಿನಿಯೋಗಕ್ಕೆ ಬೇಕು. ಭೂತದ ಕೋಲಕ್ಕೆ ಆಗುವಾಗ ರಾಮಣ್ಣ ಹೊಸತೊಂದು ಅಂಗಿ ಹೊಲಿಸಿದ್ದಾನೆ. "ಹೇಗೆ ಒಪ್ಪುವುದೇ" ಎಂದು ಅಣ್ಣನ ಹೆಂಡತಿ ಕಮಲನ ಕೂಡೆ ವಿಚಾರಿಸಿದ. ಚೆನ್ನಾಗಿದೆ ತಮ್ಮಾ ಎಂದು ಅತ್ತಿಗೆ ಕಮಲ ಪ್ರಶಂಸಿಸಿದಾಗ ನೀಲಿಯೂ ನಗುತ್ತಾ ಚೆನ್ನಾಗಿದೆಯೆಂದೇ ಒಪ್ಪಿದಳು. ಅವರಿಗೆಲ್ಲಾ ರಾಮನೆಂದರೆ ಜೀವ. ಅವನ ವೇಷ ಭೂಷಣಗಳೆಲ್ಲಾ ಚೆನ್ನಾಗಿರಬೇಕು. ಎಷ್ಟೆಂದರೂ ಮದುವೆಯಾಗದ ಅಣುಗ. ಜಾತ್ರೆಯೆಂದರೆ ಜಾತಿಯ ಹತ್ತು ಸಮಸ್ತರು ಕೂಡುವ ಜಾಗ. ವಿಧಿ ಕಣ್ಣು ತೆರೆದರೆ ರಾಮನಿಗೆ ಉತ್ತಮ ನೆಂಟಸ್ತಿಕೆಯೊಂದು ಬಂದರೆ ಸಾಲದೆ? ಮಾರಪ್ಪನೇನೋ ಬಗೆದಿದ್ದ. ಅವನ ಸಾವು ರಾಮನ ಬಾಳಿನಲ್ಲಿ ದೊಡ್ಡ ಪ್ರಮಾದವನ್ನು ತಂದಿಕ್ಕಿತು. ಎಂತಹ ಅನ್ಯಾಯವಾಯಿತು ತನ್ನ ಮಗನಿಗೆ! ಎಂದು ನೀಲಿ ತನ್ನ ದುರ್ದೆಸೆಯನ್ನು ನೆನಸುತ್ತಾ ಆಗಾಗ ಕಂಬನಿ ಮಿಡಿಯುವುದುಂಟು.

---

* ಜಾತ್ರೆ.

ಊರ ಜಾತ್ರೆ ಬಂತು. ಜಾತ್ರೆಯೆಂದರೆ ಮತ್ತೆ ಹೇಳಬೇಕೆ ಲಲ್ಲೆ? ಜಾತ್ರೆಯ ಮೊದಲ ಮೂರು ದಿನಗಳಲ್ಲಿ ನಡೆಯುವ ಕೋಳಿಕಟ್ಟಕ್ಕೆ ಗುಡ್ಡಣ್ಣ ಶೆಟ್ರು ಈ ಬಾರಿ ಎಂಭತ್ತು ಕೋಳಿಗಳನ್ನು ತಯಾರುಗೊಳಿಸಿದ್ದರೆ ಬೀಡಿನವರು ಪ್ರತಿ ಒಕ್ಕಲಿಗೆ ಎರಡೆರಡು ಕೋಳಿ ತರಲು ಆಜ್ಞಾಪಿಸಿದ ಮೇರೆಗೆ ನೂರ ಅರುವತ್ತು ತಾಜಾ ಕೋಳಿಗಳು ಬೀಡಿನಲ್ಲಿ ಬಿಂಕದಿಂದ ಕೇಕೆಹಾಕುತ್ತಿದ್ದುವು. ಈ ಸಮಾಚಾರ ಗುಡ್ಡಣ್ಣ ಶೆಟ್ರಿಗೆ ಬಹಳ ವಿಳಂಬವಾಗಿ ತಿಳಿದರೂ, ಆ ವರದಿ ಬಂದೊಡನೆ ತನ್ನ ಮಗಳ ಗಂಡನಿಗೆ ಕಾಗದ ಬರೆದು ನೂರು ತರತರದ ಕೋಳಿಗಳನ್ನು ಸಂಪಾದಿಸಿ ಯಾರಿಗೂ ಅದರ ಸಂಗತಿ ತಿಳಿಯದಂತೆ ಕೋಳಿಗಳನ್ನು ಕೋಳಿಕಟ್ಟದ ಹಿಂದಿನ ದಿನ ಸೂರ್ಯಾಸ್ತಮಾನದ ಅನಂತರ ತಂದು ಮುಟ್ಟಿಸಬೇಕಾಗಿ ಏರ್ಪಾಡು ಮಾಡಿದ್ದರಂತೆ. ಗುಡ್ಡಣ್ಣ ಶೆಟ್ರಿಗೂ ಬೀಡಿನವರಿಗೂ ಈ ರೀತಿ ಕೋಳಿಕಟ್ಟದ ಸ್ಪರ್ಧೆ ನಡೆದಿದ್ದರೆ 'ನ್ಯೂ ವಸಂತ ಭವನ'ದ ಮ್ಯಾನೇಜಿಕ ಮಹಾಲಿಂಗ ಭಟ್ಟರಿಗೂ 'ಜೈ ಹಿಂದ್ ಅಂಬಾ ಭವನ'ದ ಶಂಭಟ್ಟರಿಗೂ ಇನ್ನೊಂದು ರೀತಿಯ ಸ್ಪರ್ಧೆ ನಡೆಯಲು ತೊಡಗಿತ್ತು. ಕಳೆದ ಬಾರಿ ಶಂಭಟ್ಟರು ಕಟ್ಟಿಸಿದ ಕಾಫಿ ಹೋಟೆಲಿನ ಸ್ಥಳ ತುಂಬಾ ಆಕರ್ಷಣೀಯವಾಗಿದ್ದುದನ್ನು ನೋಡಿ ಮೂಗು ಮುರಿದುಕೊಂಡ ಮಹಾಲಿಂಗ ಭಟ್ಟರು ಈ ಬಾರಿ ಜಾತ್ರೆಯ ಇಪ್ಪತ್ತು ದಿನಗಳ ಮುಂಚಿತವಾಗಿ ಆ ಸ್ಥಳವನ್ನು ಆಕ್ರಮಿಸಿ ಅಲ್ಲಿ 'ನ್ಯೂ ವಸಂತ ಭವನ' ಕಟ್ಟಿಸಿಬಿಟ್ಟಿದ್ದಾರೆ. ಶಂಭಟ್ಟರು ಸ್ವಲ್ಪ ವಿಳಂಬ ಮಾಡಿಬಿಟ್ಟರು. ಆದರೂ ಭಟ್ಟರನ್ನು ಸೋಲಿಸಲು ಅವರು ಸಾಕು. ಮಹಾಲಿಂಗ ಭಟ್ಟರ ಹೋಟೆಲಿನಲ್ಲಿ 'ಸೇಕ್ರಿನ್' ಚಾ ಕೊಡುವ ಕಾರಣದಿಂದಲೇ ಕಳೆದ ಜಾತ್ರೆಯ ಸಮಯದಲ್ಲಿ ವಸಂತ ಭವನದಲ್ಲಿ ಮಿತಿಮೀರಿ ಚಾ ಕುಡಿಯುತ್ತಿದ್ದ ಅಂಬು ಎಂಬವನು ಸತ್ತುಹೋದುದು ಎಂಬ ಒಂದು ಸುದ್ದಿ; ಅದರ ಜತೆಗೇ ವಸಂತಭವನದಲ್ಲಿ ಕಾಫಿ ಮಾಡುವ ಆಳಿಗೆ ಕ್ಷಯರೋಗದ ಮಹಾವ್ಯಾಧಿ ಇರುವುದೆಂದೂ ಅದು ಸಾಂಕ್ರಾಮಿಕ ರೋಗವಾಗಿದ್ದು ಊರನ್ನೇ ಸುಡಲು ಸಾಕೆಂಬ ಇನ್ನೊಂದು ಸುದ್ದಿ. ಹೀಗೆ ಎರಡು ಸುಳ್ಳು ಸುದ್ದಿಗಳನ್ನು ಹುಟ್ಟಿಸಿ ಶಂಭಟ್ಟರು ಸೇಡು ತೀರಿಸಿಕೊಂಡರು. ಇದೆಲ್ಲಾ ಊರಿನ ರಾಜಕೀಯ.

ಜಾತ್ರೆಯ ಸಮಯುದಲ್ಲಿ ಭೂತದ ಮುಂದೆ ನಿಲ್ಲುವವರು ರಾಮಣ್ಣನ ಧನಿ. ಅದು ಬೀಡಿನ ಗೌರವ. ಹಿರಿಯರಿಂದ ಆಚರಿಸಿಕೊಂಡು ಬಂದ ಪದ್ಧತಿ. ಭೂತದ ಮುಂದೆ ನಿಲ್ಲುವ ಎರಡನೆಯ ಗೌರವ ತೀರಿಹೋದ

ಮಾರಪ್ಪನ ಮನೆಗೆ ಸಲ್ಲುವುದು. ಕಳೆದ ವರ್ಷದ ತನಕ ಮಾರಪ್ಪ ಧನಿಯು ವರಿಂದ ಒಂದು ಮಾರು ದೂರ ತನ್ನ ಸ್ಥಾನದಲ್ಲಿ ಜರಿಯ ಮುಂಡಾಸು ಬಿಗಿದು ನಿಂತನೆಂದರೆ ನೋಡಬೇಕಿತ್ತು ಆ ಠೀವಿ. ಊರಲ್ಲಿ ರೋಗರುಜೆಗಳು ಬಂದು ಬೆಳೆ ಚೆನ್ನಾಗಿಲ್ಲ; ಜಾನುವಾರುಗಳಿಗೆ ಸುಖವಿಲ್ಲ ಎಂದೆಲ್ಲಾ ದೂರುಗಳನ್ನು ಊರವರ ಪರವಾಗಿ ಭೂತದ ಮುಂದೆ ಮಾರಪ್ಪನೇ ನಿವೇದಿಸಬೇಕು.

ಮಾರಪ್ಪನ ಮರಣಾನಂತರ ಈ ಮರ್ಯಾದೆಯ ಸ್ಥಾನ ಯಾರಿಗೆ ಸಲ್ಲಬೇಕು? ಆ ಮಾತು ಊರಲ್ಲೆಲ್ಲಾ ಗುಲ್ಲೆಬ್ಬಿಸಿತ್ತು. ಮಾರಪ್ಪನ ಅಳಿಯಂದಿರು "ಬಂದುದೆಲ್ಲಾ ಬರಲಿ, ಮಾವನ ಮರ್ಯಾದೆ ಮಾಧವನ ಮನೆಗೆ ಹೋಗಲು ಎಂದಿಗೂ ಬಿಡೆವು" ಎಂದು ಹಲ್ಲು ಕಡಿಯುತ್ತಿದ್ದರಂತೆ. ಜಾತ್ರೆಯ ಎರಡು ದಿನಗಳ ಮುಂಚಿತವಾಗಿಯೇ ನಾಲ್ಕಾರು ಪೋಲಿ ಮಂದಿ ಯನ್ನು ಸೇರಿಸಿಕೊಂಡು ಅಲ್ಲಲ್ಲಿ ಸುತ್ತಾಡಿ ಊರಲ್ಲಿ ಭೀತಿ ಹುಟ್ಟಿಸುತಿದ್ದರು. ಊರಿಗೆ ಜೀನಸು ಮಾರಾಟಕ್ಕಾಗಿ ಬರುತ್ತಿದ್ದ ಮಮ್ಮದೆ, ನೀಲಿ—ಮಾಧವರ ಮನೆಗೂ ಬಂದವನು ಆ ಕತೆಯನ್ನೆಲ್ಲಾ ಅವರಿಗೆ ಎರಡೇ ನಿಮಿಷಗಳಲ್ಲಿ ಹೇಳಿ ಮುಗಿಸಿಬಿಟ್ಟ. "ನೀಲಿ ಅಮ್ಮಾ . . . ಇತ್ತೀಚೆಗಿನ ವಾರ್ತೆ ನಿಮಗೇನೂ ತಿಳಿದಿಲ್ಲವೇ? ಮಾವಿನ ಗಿಡವೊಂದನ್ನು ಕುಲುಕಿಸಿ ಕೇಳಿದರೂ ಅದು ಹೇಳ ಬಹುದು. ಅಷ್ಟು ಕೆಲಸ ನಡೆದಿದೆ ಅವರ ಪ್ರಚಾರ ಖಾತೆಯಲ್ಲಿ. ನಿಮ ಅಳಿಯಂದಿರು ಎರಡು ಸಾವಿರ ರೂಪಾಯಿ ಇದಕ್ಕಾಗಿ ಮೀಸಲಿರಿಸಿದ್ದಾರಂತೆ ಕೋರ್ಟು ವ್ಯವಹಾರ ಮದ್ರಾಸು ತನಕ ಹೋದರೂ ಬೆನ್ನು ಬಿಡರಂತೆ." ಎಂದು ಸಂಕ್ಷಿಪ್ತ ವರದಿ ಪ್ರಕಟಿಸಿಯೇ ಬಿಟ್ಟ ಮಮ್ಮದೆ. ಆ ಮಾತು ಈ ಮಾತು ಮುಗಿದು ಮಮ್ಮದೆ ಹೊರಡಲನುವಾದ. ಹೊರಟು ಎರಡು ಹೆಜ್ಜೆ ಹೋದವನೇ ಏನೋ ಹೇಳಲು ಮರೆತಂತೆ ಬಂದು ಪುನಃ ಕೂತ ಮಮ್ಮದೆ ಎಡಬಲ ಒಮ್ಮೆ ನೋಡಿ ಯಾರೂ ಕಿವಿಗೊಡುವುದಿಲ್ಲವೆಂದು ಖಂಡಿತವಾದ ಮೇಲೆ ಮರೆತುಹೋದ ಮಾತನ್ನು ಹೇಳತೊಡಗಿದ. ಆ ರಹಸ್ಯ ಇಷ್ಟೆ—ಕೋಳಿ ಕಟ್ಟದ ಪ್ರಕರಣದಲ್ಲಿ ಬಂದ ಗುಡ್ಡಣ್ಣ ಶೆಟ್ರಿದ್ದಾರಲ್ಲಾ ಅವರ ಕುರಿತು. ನೀಲಿ—ಮಾಧವ—ರಾಮು ಈ ಮೂವರೊಡನೆ ಮಾರಪ್ಪನ ಉತ್ತರಾಧಿಕಾರಿ ಪಟ್ಟಕ್ಕೆ ಹೋರಾಡಲು ಟೊಂಕ ಕಟ್ಟಿದ ಅಳಿಯಂದಿರಿಗೆ ಗುಡ್ಡಣ್ಣ ಶೆಟ್ರ ಬಲವಾದ ಬೆಂಬಲವಿದೆಯಂತೆ. ಗುಡ್ಡಣ್ಣ ಶೆಟ್ರೂ ಈ ಅಳಿ ಯಂದಿರೂ ಗದ್ದೆಯ ಅಂಚಿನಲ್ಲಿ ನಿಂತು ಈ ಕುರಿತು ಮಾತನಾಡುತ್ತಿದ್ದುದನು

ತಾನು ಕೇಳಿದುದಲ್ಲದೆ ಕಣ್ಣಾರೆ ಕಂಡಿದ್ದೇನೆಂದ ಮಮ್ಮದೆ. ನೀಲಿ ಇದನ್ನು ಕೇಳಿ ಅವಾಕ್ಕಾದಳು.

ಮಮ್ಮದೆ ಹೋಗಿ ಅರ್ಧತಾಸು ಕಳೆದಿರಲಿಲ್ಲ. ಯಾರೋ ಅಂಗಳದಿಂದ 'ಮನೆಯಲ್ಲಿ ಯಾರು?' ಎಂದು ಕರೆಯುತ್ತಿದ್ದರು. ಮಾಧವನೂ ನೀಲಿಯೂ ಹೊರಗೆ ಬಂದು ನೋಡಿದರೆ ಅದು ಅಂಡಮಾನ್ ಸೋಮಯ್ಯನೆಂದು ಗೊತ್ತಾಯಿತು. ಸೋಮಯ್ಯನೆಂದರೆ ಅಲ್ಲಿ ಊರಿಗೆ ಊರೇ ಹೆದರುತ್ತಿತ್ತು. ಅವನ ಶೌರ್ಯ ಸಾಹಸದ ಹಿಂದೆ ದೊಡ್ಡ ಪರಂಪರೆಯೇ ಇದೆಯಂತೆ. ನಮ್ಮ ಜಿಲ್ಲೆಯಲ್ಲಿ ಕಲ್ಯಾಣಪ್ಪನ ಕಾಟಕಾಯಿ ನಡೆದಾಗ ಅದರಲ್ಲಿ ಇವನ ಹಿರಿಯರ ಕೈವಾಡ ಇತ್ತಂತೆ. ವಿಜಯನಗರದ ಆಳಿಕೆಯ ಕಾಲದಲ್ಲಾಗಲೀ, ಟಿಪ್ಪು ಸುಲ್ತಾನನ ದಂಡಿನ ಸಮಯದಲ್ಲಾಗಲೀ, ಜೈನ, ಚೌಟ, ಬಂಗರಸರ ಕಾಲದಲ್ಲಾಗಲೀ ನಮ್ಮ ಜಿಲ್ಲೆಯಲ್ಲಿ ನಡೆದ ಐತಿಹಾಸಿಕ ಘಟನೆಗಳಲ್ಲಿ ಎಲ್ಲಾ ಸೋಮಯ್ಯನ ಹಿರಿಯರ ಪಾತ್ರ ಬಹು ದೊಡ್ಡದಂತೆ. ಅದರ ಕುರಿತು ಸೋಮಯ್ಯನೇ ಒಮ್ಮೊಮ್ಮೆ ಮಂದಿಯೊಡನೆ ಹೇಳಿಕೊಳ್ಳುವುದುಂಟು. ಹಿರಿಯರ ಕತೆ ಹಾಗಾದರೆ ಸೋಮಯ್ಯನ ವೈಯಕ್ತಿಕ ಸಾಹಸದ ಕತೆಯೇನೂ ಸಾಮಾನ್ಯವಾದುದಲ್ಲ. ಊರಿನ ಯಾವ ಕ್ರಿಮಿನಲ್ ವ್ಯವಹರಣೆಗಳಲ್ಲಿಯೂ ಸೋಮಯ್ಯನು ಇಲ್ಲದೆ ಇಲ್ಲ. ಅವನು ಕೋರ್ಟಿನಲ್ಲಿ ಗೂಡು ಹತ್ತಿದನೆಂದರೆ ಎಂಥಾ ವಕೀಲರಾದರೂ ಹೆದರಿಕೊಳ್ಳುತ್ತಾರೆಂದು ಊರಲ್ಲಿ ಸುದ್ದಿ. ಒಮ್ಮೊಮ್ಮೆ ತಾನು ಕಲಿಯುಗದ ಕಾರ್ತವೀರ್ಯಾರ್ಜುನನೆಂದು ಆತ ಜಂಭ ಕೊಚ್ಚಿಕೊಳ್ಳುವುದುಂಟು. ಆತ ಅನೇಕ ಬಾರಿ ಜೈಲಿಗೆ ಹೋಗಿಬಂದರೂ ತನ್ನ ಜೀವಿತದ ಕುರಿತು ಆತನಿಗೇನೂ ಜಿಗುಪ್ಸೆ ಬಾರದು. 'ಮನುಷ್ಯನು ಹುಟ್ಟಿದರೆ ಸಾಲದು, ಆತನು ಸಾಯುವ ತನಕ ಪರಾಕ್ರಮಿಯಾಗಿರಬೇಕು' ಎಂದು ಸೋಮಯ್ಯ ಆಗಾಗ ಉದ್ಘೋಷಿಸುವುದುಂಟು. ಹದಿನೈದು ವರ್ಷಗಳ ಹಿಂದೆ ನಡೆದ ಆ ಕೊಲೆ ಕೇಸಿನಲ್ಲಿ ಮಾತ್ರ ಸೋಮಯ್ಯ ಸೋತುಹೋದ. ತನಿಖೆ ಮುಗಿದು ತೀರ್ಪು ದೊರೆತಾಗ ಸೋಮಯ್ಯನಿಗೆ ಅಂಡಮಾನ್ ಶಿಕ್ಷೆಯಾಯಿತೆಂದು ವಾರ್ತೆ ಹಬ್ಬಿ ಊರಿಗೆ ಊರೇ ಪಾಯಸದೂಟ ಮಾಡಿಕೊಂಡಿತು. ಆದರೆ ಆ ಊರಿಗೆ ಹಿಡಿದ ಶನಿ ಬಿಡಬೇಕಲ್ಲ. ಅವಧಿ ಮುಗಿಯುವ ಮೊದಲೇ ಒಮ್ಮೆ ಎಲ್ಲಾ ಕೈದಿಗಳ ಬಿಡುಗಡೆಯಾದಾಗ ಸೋಮಯ್ಯನು ಹೊರಬಂದ. ಅಂದಿನಿಂದ ಆತಗೆ ಅಂಡಮಾನ್ ಸೋಮಯ್ಯನೆಂಬ ವಿಶೇಷಣವೂ ಬಂತು.

ಸೋಮಯ್ಯ ಅಂಡಮಾನಿನಿಂದ ಬಂದ ಅನಂತರ ಗುಡ್ಡಣ್ಣ ಶೆಟ್ರ ಅಳಿಯ ನಾರಾಯಣ ಶೆಟ್ರ ತೈನಾತಿನ* ಜನವಾಗಿದ್ದಾನೆ. ಹೋಗುವಲ್ಲಿಗೆ ಬರುವಲ್ಲಿಗೆ ನಾರಾಯಣ ಶೆಟ್ರಿಗೆ ಸೋಮಯ್ಯ ಬೇಕೇ ಬೇಕು.

ನಾರಾಯಣ ಶೆಟ್ರಿಗೆ ತನ್ನ ಮಾವ ಗುಡ್ಡಣ್ಣ ಶೆಟ್ರ ಮೇಲೆ ಹಗೆತನ ಉಂಟಾದ ಅನಂತರವಂತೂ ಸೋಮಯ್ಯನನ್ನು ಅವರು ಬಹಳ ಪ್ರೀತಿಸುತಿದ್ದಾರೆ. ನಾರಾಯಣ ಶೆಟ್ರ ಮತ್ತು ಅವರ ಮಾವ ಗುಡ್ಡಣ್ಣ ಶೆಟ್ರ ಹಗೆತನದ ಕುರಿತು ಒಂದು ಚಿಕ್ಕ ಮಾತು. ಅವರದು ಅಳಿಯ ಸಂತಾನ ಕಟ್ಟಳೆಯ ಕುಟುಂಬ. ಗುಡ್ಡಣ್ಣ ಶೆಟ್ರ ಮರಣಾನಂತರ ಸರ್ವ ಆಸ್ತಿಗಳಿಗೂ ಉತ್ತರಾಧಿಕಾರಿ ಆಗುವವರು ನಾರಾಯಣ ಶೆಟ್ಟರು. ಆದರೆ ಗುಡ್ಡಣ್ಣ ಶೆಟ್ರು ಜೀವಿಸಿರುವ ತನಕ ನಾರಾಯಣ ಶೆಟ್ಟರು ಪಿಟ್ಟೆನ್ನದೆ ಇರಬೇಕು. ಅಂತಹ ವ್ಯಕ್ತಿ ಗುಡ್ಡಣ್ಣ ಶೆಟ್ಟರು. ಕಳೆದ ಜಾತ್ರೆಯ ಸಮಯದ ವರೆಗೆ ಅಳಿಯ ಮಾವಂದಿರು ಸ್ನೇಹದಿಂದಲೇ ಇದ್ದರು. ಆಗ ಇನ್ನೊಂದು ಕತೆ ನಡೆಯಿತು. ತನಗಿರುವ ಒಬ್ಬಳೇ ಒಬ್ಬಳಾದ ಮಗಳನ್ನು ಅಳಿಯನಿಗೆ ವಿವಾಹಮಾಡಿಕೊಟ್ಟರೆ ಮುಂದೆ ತನ್ನ ಸ್ವಂತ ಆಸ್ತಿಯೂ ಕುಟುಂಬದ ಆಸ್ತಿಯೂ ಎಲ್ಲಾ ತನ್ನ ಮಗಳಿಗೇ ಬರುವುದೆಂದು ನಂಬಿ ಸುಬ್ರಾಯ ಆಚಾರಿಗಳ ಮೂಲಕ ಮದುವೆಯ ನೆಂಟಸ್ತಿಕೆಯನ್ನು ಕಳುಹಿಸಿದರು. ನಾರಾಯಣ ಶೆಟ್ಟಿ ಸ್ವಲ್ಪ ಎಳೆಯ ವಯಸ್ಸಿನ ಹುಡುಗಾಟಿಕೆಯ ಹುಡುಗ. ಜತೆಗೆ ಸ್ವಲ್ಪ ಇಂಗ್ಲಿಷು ಓದಿದ್ದಾನೆ. ತಾನು ಮದುವೆ ಆಗುವುದಕ್ಕೆ ಅಡ್ಡಿಯಿಲ್ಲ . . . ತನಗೆ ಅನೇಕ ಕಡೆಗಳಿಂದ ನೆಂಟಸ್ತಿಕೆ ಬರುತ್ತಿದೆ . . . ಉಡುಪಿಯವರು ಹದಿನೈದು ಸಾವಿರ ವರದಕ್ಷಿಣೆ ಕೊಡುವೆವೆಂದು ಹೇಳಿದ್ದಾರೆ . . . ಅಷ್ಟೇ ಮಾವನೂ ಕೊಡುವದಿದ್ದರೆ ನೋಡೋಣವೆಂದು ಉತ್ತರವಿತ್ತ. ಅದಕ್ಕೆ ಎರಡು ಮೂರು ಹೊಸ ಬಣ್ಣ ಹಚ್ಚಿ ಸುಬ್ರಾಯ ಆಚಾರಿಗಳು ಗುಡ್ಡಣ್ಣ ಶೆಟ್ರಲ್ಲಿ ಹೇಳಿದ್ದೇ ತಡ, ಅವರು ಸಿಟ್ಟಿನಿಂದ ಕೆರಳಿದರು. ದೀರ್ಘ ಆಲೋಚನೆ ಮಾಡಿ ಸುಬ್ರಾಯ ಆಚಾರಿಗಳನ್ನು ಪುನಃ ಕಳುಹಿಸಿದರು.

"ಗುಡ್ಡಣ್ಣ ಶೆಟ್ರು ನಿನ್ನಂತಹನಿಗೆ ಅವರ ಮಗಳನ್ನು ವಿವಾಹಮಾಡಿ ಕೊಡಬಹುದೆಂದು ನೀನು ಕನಸಿನಲ್ಲಾದರೂ ನೆನಸುವುದು ಬೇಡವಂತೆ. ಬರೇ ತಮಾಷೆಗಾಗಿ ಅವರು ಹೇಳಿ ಕಳುಹಿಸಿದುದಂತೆ. ದೇವರು ನಡೆಸಿದರೆ ಅವರ

* ಅಂಗರಕ್ಷಕ ಅಥವಾ ಕಾರ್ಯಸ್ಥ.

ಮಗಳ ಮದುವೆ ಇನ್ನು ಒಂದು ತಿಂಗಳ ಅವಧಿಯಲ್ಲಿ ಜರಗಬಹುದಂತೆ. ಅದಕ್ಕೆ ಇದೇ ಆಹ್ವಾನವಂತೆ. ಸಮಯ ದೊರೆತರೆ ದಯವಿಟ್ಟು ವಿವಾಹ ಸಮಾರಂಭಕ್ಕೆ ಬರಬೇಕಂತೆ" ಎಂದು ಹೇಳಿದುದನ್ನು ಸುಬ್ರಾಯ ಆಚಾರಿಗಳು ಬಂದು ನಾರಾಯಣ ಶೆಟ್ರಲ್ಲಿ ಹೇಳಿಯೂ ಆಯಿತು.

ನಾರಾಯಣ ಶೆಟ್ರು ಇನ್ನೂ ಸ್ವಲ್ಪ ಹೆಚ್ಚು ಮುಂಗೋಪಿ ಜನ. ಎಳೆ ವಯಸ್ಸು ಬೇರೆ. ಸುಬ್ರಾಯ ಆಚಾರಿಗಳೊಡನೆ ಮಾವನಿಗೆ ಉತ್ತರ ಕಳುಹಿಸಿಬಿಟ್ಟರು.

"ನಿಮ್ಮ ಮಗಳನ್ನು ಹದಿನೈದು ಸಾವಿರವಲ್ಲ—ಒಂದು ಲಕ್ಷ ರೂಪಾಯಿ ವರದಕ್ಷಿಣೆ ಕೊಟ್ಟರೂ ವಿವಾಹವಾಗುವ ಜನ ನಾರಾಯಣ ಶೆಟ್ಟಿಯಲ್ಲ. ಅದು ತಮಾಷೆಗಾಗಿಯೇ ಹೇಳಿದುದಂತೆ. ಕುಟುಂಬದ ಆಸ್ತಿಯನ್ನು ಮನಸ್ಸಿಗೆ ಬಂದಂತೆ ಮಾಡಿ ಹೆಂಡತಿ ಮಕ್ಕಳಿಗೆ ಇನ್ನೂ ಮಹಡಿಯ ಮನೆಯನ್ನು ಕಟ್ಟಿಸುವೆನೆಂದು ಅವರು ಕನಸಿನಲ್ಲಿಯೂ ನೆನಸುವುದು ಬೇಡವಂತೆ. ಕುಟುಂಬದ ಆಸ್ತಿಯಲ್ಲಿ ಕುಟುಂಬದವರಿಗೆ ಪ್ರತ್ಯೇಕಿಸಿ ಜೀವನಾಂಶವನ್ನು ವಿಂಗಡಿಸಿ ಹದಿನೈದು ದಿನಗಳೊಳಗೆ ಕೊಡದಿದ್ದರೆ, ಅವರೇ ಸ್ವಾಧೀನಪಡಿಸಿ ಕೊಳ್ಳುವರಂತೆ" ಎಂದು ನಾರಾಯಣ ಶೆಟ್ರು ಹೇಳಿಕಳುಹಿಸಿದ ಉತ್ತರ ಗುಡ್ಡಣ್ಣ ಶೆಟ್ರಿಗೆ ಆಚಾರಿಗಳ ಮೂಲಕ ತಲಪಿತು.

ಅದರಂತೆ ಗುಡ್ಡಣ್ಣ ಶೆಟ್ರ ಮಗಳ ಮದುವೆ ಮುಂದಿನ ತಿಂಗಳಲ್ಲಿ ಬಹಳ ವಿಜ್ರಂಭಣೆಯಿಂದ ಜರುಗಿತು.

ಕುಟುಂಬದ ಆಸ್ತಿಯನ್ನು ವಿಭಜಿಸಿ ಉಳಿದವರಿಗೆ ಪಾಲು ಕೊಡದ ಕಾರಣ ನಾರಾಯಣ ಶೆಟ್ರು ಬಲಾತ್ಕಾರದಿಂದ ಅಂಡಮಾನ್ ಸೋಮಯ್ಯನ ಮೂಲಕ ಸ್ವಾಧೀನಮಾಡಿಕೊಂಡರು. ಇಷ್ಟಾದರೂ ಗುಡ್ಡಣ್ಣ ಶೆಟ್ರು ಪಿಟ್ಟೆನ್ನದೆ "ನೋಡೋಣ-ಇನ್ನೊಂದು ಸಂದರ್ಭದಲ್ಲಿ ಸಿಕ್ಕದೆ ಇರಲಾರನು" ಎಂದು ಕುಳಿತಿದ್ದರು. ನಾರಾಯಣ ಶೆಟ್ರೂ ಅಂತಹ ಸಂದರ್ಭವನ್ನೇ ಇದಿರು ನೋಡುತಿದ್ದರು.

ಹೋರಾಡಿಕೊಳ್ಳಲು ಸಂದರ್ಭಗಳೆಷ್ಟೋ ಸಿಗುತ್ತವೆ. ಈಗ ಅಂತಹ ಒಂದು ಸಂದರ್ಭವೂ ದೊರೆಯಿತು. ಜಾತ್ರೆಯ ಸಮಯ ಮಾರಪ್ಪನ ಗೌರವದ ಸ್ಥಾನವನ್ನು ಅವನ ಮಗ ಮಾಧವನಿಂದ ಕಸಿದುಕೊಂಡು ತಾವು ಪಡೆದುಕೊಳ್ಳಬೇಕೆಂದು ನಿರ್ಧರಿಸಿರುವ ಮಾರಪ್ಪನ ಅಳಿಯಂದಿರಿಗೆ

ಗುಡ್ಡಣ್ಣ ಶೆಟ್ರ ಬೆಂಬಲವಿದೆ ಎಂದು ಊರಲ್ಲೆಲ್ಲಾ ಈಗ ಜನಜನಿತವಾಗಿದೆ. ತಾನು ಒಂದು ಪಕ್ಷ ಹಿಡಿದರೆ ಇನ್ನೊಂದು ಪಕ್ಷ ನಾರಾಯಣ ಶೆಟ್ಟಿ ಹಿಡಿಯದೆ ಬಿಡಲಾರನು ಎಂದು ಗುಡ್ಡಣ್ಣ ಶೆಟ್ರಿಗೆ ಗೊತ್ತಿತ್ತು. ಈ ವರ್ತಮಾನ ತಿಳಿದೇ ನಾರಾಯಣ ಶೆಟ್ರು ತನ್ನ ತೈನಾತಿನ ಸೋಮಯ್ಯನನ್ನು ನೀಲಿ—ಮಾಧವರ ಮನೆಗೆ ಅವರಿಗೆ ತನ್ನ ಸಹಾಯವೇನಾದರೂ ಬೇಕೋ ಎಂದು ತಿಳಿದುಬರಲು ಕಳುಹಿಸಿದುದು.

ನೀಲಿ ಚುರುಕು ಬುದ್ಧಿಯ ಹೆಂಗಸು. ಮಾಧವನನ್ನು ಕರೆದು ಕಿವಿಯಲ್ಲಿ "ಮಗೂ-ನಮಗೆ ಗೌರವದ ಸ್ಥಾನ ಕಳೆದುಹೋದರೂ ಚಿಂತಿಲ್ಲ— ಈ ಗಂಡಾಂತರಗಳಿಗೆಲ್ಲಾ ತಲೆಯೊಡ್ಡುವುದು ಎಂದಿಗೂ ಬೇಡ. ನಮ್ಮ ವಿಧಿಯಂತಾಗಲೀ" ಎಂದು ಪಿಸುಗುಟ್ಟಿದಳು. ಅನಂತರ ನೀಲಿ ಮತ್ತು ಮಾಧವ ಇಬ್ಬರೂ ಏಕಕಂಠದಿಂದ ಸೋಮಯ್ಯನೊಡನೆ ಅಂಗಳದಿಂದ "ನಮಗೆ ಈ ವಿಷಯದಲ್ಲಿ ಯಾರ ಸಹಾಯವೂ ಬೇಡ. ಅದೆಲ್ಲಾ ದೇವರ ಕೃಪೆಯಿದ್ದಂತಾಗುವುದು." ಎಂದು ಹೇಳಿ ಕಳುಹಿಸಿಬಿಟ್ಟರು. ಸೋಮಯ್ಯ ಬಂದಹಾಗೆ ಹಿಂದೆ ಹೋದ.

ನಾರಾಯಣ ಶೆಟ್ಟಿ ಎದುರುಪಕ್ಷ ಹಿಡಿಯುವುದಿಲ್ಲವೆಂದು ಸುದ್ದಿ ಕೇಳಿದ ಕೂಡಲೇ ಗುಡ್ಡಣ್ಣ ಶೆಟ್ರು ಮಾರಪ್ಪನ ಅಳಿಯಂದಿರನ್ನು ಕರೆದು ನಾರಾಯಣ ಶೆಟ್ಟಿ ಎದುರು ಪಕ್ಷ ವಹಿಸುತಿದ್ದರೆ ಮಾತ್ರ ತಾನು ಸಹಾಯ ಕೊಡುತ್ತಿದ್ದೆನೆಂದೂ ಸದ್ಯದ ಪರಿಸ್ಥಿತಿಯಲ್ಲಿ ತಾನು ತಟಸ್ಥನಾಗಿ ನಿಲ್ಲುವೆನೆಂದೂ ನಿರ್ದಾಕ್ಷಿಣ್ಯವಾಗಿ ನುಡಿದುಬಿಟ್ಟರು.

ನೀಲಿಯ ಚುರುಕು ಬುದ್ಧಿಯಲ್ಲವಾದರೆ ಮಾವ—ಅಳಿಯಂದಿರ ಹಗೆತನದ ಕಾದಾಟದಲ್ಲಿ ಎರಡು ಬಡ ಕುಟುಂಬಗಳು ಸೇರಿಕೊಂಡು ಮಣ್ಣುಪಾಲಾಗುತಿದ್ದಿರಬಹುದು. ನೀಲಿ ಆ ಅಪಾಯವನ್ನು ತನ್ನ ಜಾಣ್ಮೆಯಿಂದಲೇ ತಪ್ಪಿಸಿಕೊಂಡಳು.

---

## 4

ಮಾಧವ ಅಷ್ಟು ಬಿಂಕದ ಮಗನಲ್ಲ. ರಾಮನೂ ಸಾಧು ಹುಡುಗ. ಆದರೆ ಶೀಘ್ರ ಕೋಪಿ. ಈ ಸಂಗತಿಗಳೆಲ್ಲಾ ರಾಮನ ಕಿವಿಗೆ ಬಿದ್ದರೆ ಪರಿಣಾಮ ನೆಟ್ಟಗಾಗದೆಂದು ಅವರಿಗೆ ಸಂದೇಹವಿದ್ದೇ ಇದೆ. ಅದಕ್ಕಾಗಿ

ಮಮ್ಮದೆ ಮನೆಗೆ ಬಂದುದನ್ನು, ಅವನ ಅನಂತರ ಸೋಮಯ್ಯ ಬಂದುದನ್ನು ರಾಮನಿಗೆ ತಿಳಿಸದೆ ಗುಟ್ಟಾಗಿಯೇ ಇರಿಸಿದ್ದರು. ಕಟ್ಟಕಡೆಗೆ ತಮ್ಮ ಮನೆಯಿಂದ ಜಾತ್ರೆಗೆ ಹೋಗುವುದೇ ಬೇಡವೆಂದು ನೀಲಿ ಮತ್ತು ಮಾಧವರು ನಿಶ್ಚಯಿಸಿ ಅದನ್ನು ರಾಮನಲ್ಲಿಯೂ ಹೇಳಿದರು.

ರಾಮನಿಗೆ ಆಶ್ಚರ್ಯ. ಐದು ವರ್ಷಕ್ಕೊಮ್ಮೆ ಜರಗುವ ಊರ ಜಾತ್ರೆ ಅದರಲ್ಲಿಯೂ ತಮ್ಮ ತೀರಿದ ತಂದೆ ಮಾರಪ್ಪನಿರುವಾಗ ಜಾತ್ರೆಯ ಕೆಲಸಗಳಿಗೆಲ್ಲಾ ಸ್ವಯಂಸೇವಕರಾಗಿ ದುಡಿಯುತಿದ್ದುದು ರಾಮನಿಗೆ ಮರೆತಿರಲಿಲ್ಲ. ಈಗ ತಂದೆ ತೀರಿಹೋದ ಕೂಡಲೆ ಹಾಗೆ ಜಾತ್ರೆಗೆ ಹೋಗದಿದ್ದರೆ ಪರಲೋಕದಲ್ಲಿರುವ ತಂದೆಯೂ ಮುನಿದುಕೊಳ್ಳದೆ ಇರುವನೇ ಎಂದು ರಾಮ ತಾಯಿ ನೀಲಿಗೆ ಸವಾಲು ಮಾಡಿಯೇ ಬಿಟ್ಟ.

ನೀಲಿಯ ಚುರುಕು ಬುದ್ಧಿಯ ಮುಂದೆ ಯಾರ ವಾಕ್‌ಸಾಮರ್ಥ್ಯವೂ ಫಲಕಾರಿಯಾಗಲಾರದು. "ಆಗದು ರಾಮಾ..... ನೋಡು ನಿನ್ನಪ್ಪ ತೀರಿಹೋಗಿ ಇನ್ನೂ ಐದು ವರ್ಷ ದಾಟುತ್ತಾ ಇದೆ. ಅವರಿದ್ದರೆ ನಾವೆಷ್ಟೋ ಜಾತ್ರೆಗಳನ್ನು ಜರಗಿಸಬಹುದಿತ್ತು. ಎಷ್ಟೋ ಜಾತ್ರೆಗಳಿಗೆ ಹೋಗಿ ಆನಂದ ಪಡಬಹುದಿತ್ತು. ಆ ಭಾಗ್ಯವನ್ನು ವಿಧಿ ನಮ್ಮಿಂದ ಕಸಿದುಕೊಂಡಿತು. ಅವರಿಲ್ಲದ ನಮ್ಮ ಬಾಳು ಎಷ್ಟು ಹಾಳು. ಅಯ್ಯೋ..... ಕಳೆದ ಜಾತ್ರೆಗೆ ಅವರು ಆ ಮರ್ಯಾದೆಯ ಸ್ಥಾನದಲ್ಲಿ ಬೀಡಿನ ಧನಿಗಳ ಪಕ್ಕದಲ್ಲಿ ಜರಿಯ ಮುಂಡಾಸು ಬಿಗಿದು ನಿಂತಿದ್ದುದು ಈಗಲೂ ನನ್ನ ಕಣ್ಣಮುಂದೆ ಚಿತ್ರಪಟದಂತೆ ನಲಿಯುತ್ತಲಿದೆ. ಅದನ್ನು ಸ್ಮರಿಸಿಕೊಂಡಂತೆಯೇ ನನ್ನ ಹೃದಯ ನೋಯುತ್ತಿದೆ. ನೀನೂ ಮಾಧವನೂ ಜಾತ್ರೆಗೆ ಸ್ವಯಂಸೇವಕರಾಗಿ ಎಷ್ಟು ದುಡಿಯುತಿದ್ದಿರಿ? ಜಾತ್ರೆಯ ಚಪ್ಪರವನ್ನು ತಳಿರುತೋರಣಗಳಿಂದ ಶೃಂಗರಿಸುತಿದ್ದವರು ನೀವಲ್ಲವೆ ಮಗು? ಪರ ಊರಿನಿಂದ ಬಂದವರನ್ನು ನಗುಮೊಗದಿಂದ ಹೋಗಿ ಸ್ವಾಗತಿಸಿ ಸತ್ಕರಿಸುತಿದ್ದವರು ನೀವಲ್ಲವೇ ಮಗು? ಅದನ್ನು ನೋಡಿ ಬೀಡಿನ ಧನಿಗಳು 'ಮಾರಪ್ಪಾ...... ನಿನ್ನ ಮಕ್ಕಳೆಷ್ಟು ಚುರುಕು.........' ಎಂದು ಪ್ರಶಂಸಿಸುತ್ತಿರುವಾಗ ನಿಮ್ಮಪ್ಪ ಎಷ್ಟು ಹಿಗ್ಗಿಕೊಂಡರು! ಆದರೆ ಆ ಭಾಗ್ಯವನ್ನು ನಾವು ಇನ್ನೂ ಉಳಿಸಿಕೊಳ್ಳಲಾರದೆ ಹೋದೆವು. ಇನ್ನು ನಮಗೆ ಜಾತ್ರೆಯೇ....." ಎಂದು ನೀಲಿ ತನ್ನ ಮಾತನ್ನು ಮುಗಿಸುವಲ್ಲಿದ್ದಳು. ಮಾತಿನ ರಭಸದಲ್ಲಿ ತನ್ನ ಉಪನ್ಯಾಸವೆಷ್ಟು

ದೀರ್ಘವಾಯಿತೆಂದು ಅವಳಿಗೇ ತಿಳಿದಿರಲಿಲ್ಲ. ಮಾತು ನಿಲ್ಲಿಸಿ, ನೀಲಿ ರಾಮನ ಮುಖ ನೋಡುತ್ತಾಳೆ. ಎಂತಹ ಸಂತಾಪಕರ ನೋಟವದು! ರಾಮ ಬಿಕ್ಕಿ ಬಿಕ್ಕಿ ಅಳುತಿದ್ದಾನೆ. ಕಂಬನಿ ಒಂದೇ ಸವನೆ ಹರಿದು ಹೋಗುತ್ತಿದೆ. ತನ್ನ ತಂದೆ ತನ್ನಮೇಲೆ ತೋರಿದ ಅಪಾರ ಪುತ್ರ ವಾತ್ಸಲ್ಯಕ್ಕೆ ಇದಕ್ಕಿಂತ ಹೆಚ್ಚಿನ ಕಾಣಿಕೆಯೇನು?

ಹೀಗೆ ತಾಯಿ ಮಕ್ಕಳೊಡನೆ ಮಾತುಕತೆ ನಡೆದುದು ಜಾತ್ರೆಯ ಮೂರು ದಿನಗಳ ಮೊದಲು. ತಾಯಿ ಹೇಳಿದ ಮಾತುಗಳು ರಾಮನ ಹೃದಯದೊಳಗೆ ಇನ್ನೂ ಪ್ರತಿಧ್ವನಿಸುತಿದ್ದುವು. ಆದರೂ ಆತ ಜಾತ್ರೆ ನಡೆಯುವ ಬಯಲಿಗೇ ಹೋಗದೆ ಉಪಾಯವಿಲ್ಲ. ನೆರೆಯ ಮಮ್ಮದೆ ಜಾತ್ರೆಯ ಬಯಲಲ್ಲಿ ಬಾಳೆ ಹಣ್ಣಿನ ಸಂತೆ ಇಡುವನಂತೆ. ಅದಕ್ಕಾಗಿ ಆತ ರಾಮನ ನೆರವು ಕೇಳಿದ್ದಾನೆ. ರಾಮನೂ ನೆರವು ನೀಡುವೆನೆಂದು ಮಾತು ಕೊಟ್ಟಿದ್ದಾನೆ. ರಾಮನ ಸಂಗಾತಿಗಳಾದ ತಿಮ್ಮ, ಸುಬ್ಬ, ಹೊಲೆಯ ಬಟ್ಯ ಎಲ್ಲರೂ ಕೂಡಿ ಕೆಲಸ ಯಶಸ್ವಿಯಾಗುವಂತೆ ದುಡಿಯುವೆವೆಂದು ರಾಮನಿಗೆ ಆಶ್ವಾಸನೆಯಿತ್ತಿದ್ದಾರೆ. ನಾಲ್ಕು ಮಂದಿಯ ಆ ಕೂಟಕ್ಕೆ ತಾನೊಬ್ಬ ಮುಖ್ಯಸ್ಥ ಎಂಬ ಅಭಿಮಾನವಿದೆ ರಾಮನಲ್ಲಿ. ಹೋಗುವಲ್ಲಿ ಬರುವಲ್ಲಿ ರಾಮ ತನ್ನವರಿಗಾಗಿ ಹಣಸುರಿಯುತ್ತಾನೆ. ತಾಯಿಯ ಮಾತನ್ನು ಅಲ್ಲಗಳೆಯಲೂ ಬಾರದು—ಮಮ್ಮದೆಗೆ ಕೊಟ್ಟ ವಚನಕ್ಕೆ ತಪ್ಪಲೂ ಬಾರದು. ಎಂತಹ ವಿಪತ್ತಿಗೆ ಸಿಲುಕಿದ ರಾಮ. ಜಾತ್ರೆಯ ಬಯಲಲ್ಲಿ ಮಮ್ಮದೆಯ ಬಾಳೆಹಣ್ಣಿನ ಸಂತೆಯ ಕೆಲಸಗಳಲ್ಲಿ ನೆರವು ನೀಡುತ್ತಲಿರುವೆನು ಮಾತ್ರವಲ್ಲದೆ ಜಾತ್ರೆ ನಡೆಯುವ ದೇಗುಲಕ್ಕೆ ಹೋಗಲಾರೆನೆಂದು ತಾಯಿಯೊಡನೆ ನಿವೇದಿಸಿಕೊಂಡ. ಇನ್ನು ಹೆಚ್ಚಿನ ನಿರ್ಬಂಧ ಮಾಡಬಾರದೆಂದು ನೀಲಿಯೂ ಸುಮ್ಮನಾದಳು.

ಜಾತ್ರೆಯ ದಿನ ಬಂತೇ ಬಂತು. ಜಾತ್ರೆಯ ಬಯಲಲ್ಲಿ ಮಂದಿ ನೆರೆದಿದ್ದಾರೆ. ಊರಿಗೇ ಊರೇ ಕೋಲಾಹಲ.

ಭೂತದ ದರ್ಶನಕ್ಕೆ ಇನ್ನೊಂದು ತಾಸು ಇರುವ ತನಕವೂ ರಾಮ ಮಮ್ಮದೆಯ ಸಂತೆಯಂಗಡಿಯಲ್ಲೇ ಕುಳಿತಿದ್ದಾನೆ. ಅವನ ಪಕ್ಕದಲ್ಲೇ ಸಂಗಡಿಗರೂ ಇದ್ದಾರೆ. ನೀಲಿ ಮತ್ತು ಮಾಧವರು ಜಗಳದ ಕುರಿತು ರಾಮನ ಕಿವಿಗೆ ಬೀಳದಂತೆ ಜಾಗೃತೆ ವಹಿಸಿದ್ದರೂ ಅಧಿಕ ಪ್ರಸಂಗಿ ಮಮ್ಮದೆ

ಹೇಳದೆ ಬಿಡುವನೇ? ಈಗಲಂತೂ ಈ ಸುದ್ದಿಯೆಲ್ಲಾ ಊರಲ್ಲೇ ಹಬ್ಬಿದೆ. ಆದರೆ ಇದೆಲ್ಲಾ ಅಷ್ಟು ಪ್ರಾಮುಖ್ಯವಾದ ಘಟನೆಗಳೆಂದು ರಾಮನು ಎಣಿಸಿರಲಿಲ್ಲ. ಹಾಗಿರುತ್ತಿದ್ದರೆ ತಾಯಿ ಮತ್ತು ಅಣ್ಣ ತನ್ನಲ್ಲಿ ಹೇಳದೆ ಇರುತ್ತಿರಲಿಲ್ಲವೆಂದೂ ರಾಮು ನಂಬಿದ್ದ.

ಧನಿಯವರು ಮುಂಡಾಸು ಬಿಗಿದು ಮುಂದೆ ನಿಂತಿದ್ದಾರೆ. ಗೌರವದ ಸ್ಥಾನವದು. ಅವರ ಪಕ್ಕದಲ್ಲಿ ನಿಲ್ಲುತಿದ್ದವನು ಮಾರಪ್ಪ. ಅದು ಎರಡನೆಯ ಗೌರವದ ಸ್ಥಾನ. ಮಾರಪ್ಪನ ಉತ್ತರಾಧಿಕಾರಿಗಳು ಯಾರೆಂದು ನಿರ್ಣಯಿಸುವ ದಿನವಿದು. ಸಂದಿಗ್ಧ ಪರಿಸ್ಥಿತಿ. ಜನರೆಲ್ಲ ಮುಂದು ಮುಂದಾಗಿ ನುಗ್ಗುತಿದ್ದಾರೆ. ಭೂತದ ಕೋಲಕ್ಕಿಂತಲೂ ಮಾರಪ್ಪನ ಗೌರವ ಯಾರಿಗೆ ಸಲ್ಲುವುದೆಂದು ನಿರೀಕ್ಷಿಸಲು ಬಂದ ಮಂದಿಯೇ ಹೆಚ್ಚು. ಎಲ್ಲರೂ ನೋಡುತ್ತಿದ್ದಂತೆಯೇ ಮಾರಪ್ಪನ ಅಳಿಯಂದಿರಲ್ಲಿ ಹಿರಿಯವನಾದ ಮಂಜಪ್ಪ ಮುಂಡಾಸು ಬಿಗಿದು ಆ ಸ್ಥಾನದಲ್ಲಿ ಬಂದು ನಿಂತಿದ್ದಾನೆ. ಅವನ ಹಿಂದೆ ರಕ್ಷಣೆಗಾಗಿ ಹತ್ತುಮಂದಿ ಊರ ಸೋಮಾರಿ ಜನರ ತಂಡ. ಅವರು ನಿಂತ ಠೀವಿ ನೋಡಿದರೆ ಯಾವ ಪ್ರತಿಗಾಮಿ ಶಕ್ತಿಯೂ ಅವರ ಎದೆಗಾರಿಕೆಯನ್ನು ಮುರಿಯುವಂತಿಲ್ಲವೆಂದು ಭಾಸವಾಗಲೇ ಬೇಕು. ಮಾಧವನ ಸುಳಿವಿಲ್ಲ. ಎಲ್ಲರೂ ಗೊಳ್ಳೆಂದು ನಕ್ಕರು. ಜಗಳವನ್ನು ನೋಡಲು ನಿರಾಸೆಗೊಂಡ ಜನಸ್ತೋಮ ಸ್ವಲ್ಪ ಚದರಿತು. ಭೂತವು ಗುಡಿಬಿಟ್ಟು ಬರುವ ಹೊತ್ತಾಯಿತು.

ಮಮ್ಮದೆಯ ಸಂತೆಯಂಗಡಿಯ ಗೌಜಿ ನೋಡಬೇಕು. ಎಂತಹ ವ್ಯಾಪಾರ! ಮೊದಲು ತಂದಿರಿಸಿದ ನೂರು ಗೊನೆ ಬಾಳೆ ಹಣ್ಣುಗಳು ಎರಡೇ ತಾಸುಗಳಲ್ಲಿ ಖರ್ಚಾದುವಂತೆ. ಇನ್ನೂ ಮುನ್ನೂರು ಗೊನೆಗಳಿಗೆ ಮಂಜೇಶ್ವರಕ್ಕೆ ಸೈಕಲಿನಲ್ಲಿ ಜನ ಕಳುಹಿಸಿ, ಜನದ ಹಿಂದೆ ಎತ್ತಿನ ಗಾಡಿಯನ್ನು ಅಟ್ಟಿದ್ದಾನೆ. ಬಂದವರನ್ನು ಸಲಾಂ ಮಾಡಿ ಕುಳಿತುಕೊಳ್ಳಿಸುವುದು ಮಮ್ಮದೆ. ಅವರಿಗೆ ಬೇಕಾಗುವ ಹಣ್ಣಿನ ಸಂಖ್ಯೆಹೇಳಿ ಕರೆಯುವುದು ರಾಮನ ಪರಿವಾರದ ತಿಮ್ಮ. ಒಳಗಿನಿಂದ ಗೊನೆಗೆ ಚೂರಿಯಿಂದ ಕಡಿದು ಲೆಕ್ಕಮಾಡಿ ಇಡುವುದು ಸುಬ್ಬ. ಅವರು ತಿಂದು ಸಂತೋಷದಿಂದ ದುಡ್ಡು ಕೊಟ್ಟು ಹೋಗಬೇಕು. ದುಡ್ಡು ಪಡಕೊಂಡು ಎಣಿಸಿ ಪೆಟ್ಟಿಗೆಯೊಳಗೆ ಹಾಕುವುದು ರಾಮು. ಮಮ್ಮದೆ ಗೆಮಾತಾಡುತ್ತಲೇ ಇರಬೇಕು. "ಇದೆಲ್ಲಾ

ನಮ್ಮ ಪುಣ್ಯ. ಹಿಂದೂ-ಮುಸ್ಲಿಂ ಸೌಹಾರ್ದ ನೋಡಬೇಕಿದ್ದರೆ ಇಲ್ಲಿ ಬರಬೇಕು. ವ್ಯಾಪಾರವೆಲ್ಲಾ ತನ್ನದು. ರಾಮಣ್ಣನವರಿಗೆ ಇದರಲ್ಲಿ ಒಂದು ಚಿಕ್ಕಾಸೂ ಇಲ್ಲ. ಅದರೂ ಅವರ ಒಂದು ನಿಷ್ಕಪಟ ಪ್ರೇಮ, ಒಂದು ಉದಾರ ಮನಸ್ಸು, ಅದೆಲ್ಲಾ ಕೊಂಡಾಡತಕ್ಕವುಗಳು. ಇಂತಹ ಉತ್ತಮ ನಡತೆಯ ಇನ್ನೊಬ್ಬ ಹುಡುಗನನ್ನು ಈ ಊರಲ್ಲಿ ತೋರಿಸಿದವರಿಗೆ ನನ್ನ ಈ ದಿನದ ವ್ಯಾಪಾರದ ಲಾಭವೆಲ್ಲವನ್ನು ಕೊಡಲು ಹಿಂಜರಿಯಲಾರೆ......." ಎಂದು ರಾಗವೆಳೆಯುತ್ತಲೇ ಇದ್ದಾನೆ ಮಮ್ಮದೆ.

ಮಮ್ಮದೆಯ ಅಂಗಡಿಯ ಎದುರು ಒಂದು ಗುಂಪು ಹಾದು ಹೋಗುವುದರಲ್ಲಿತ್ತು. ಅಂಡಮಾನ್ ಸೋಮಯ್ಯನೂ ಅದರಲ್ಲಿದ್ದಾನೆ. ಜಗಳವನ್ನು ನೋಡಲು ನಿರಾಸೆಗೊಂಡ ಕೆಲವರೂ ಆ ಗುಂಪಿನಲ್ಲಿದ್ದಾರೆ.

"ಮರ್ಯಾದೆ ಕಳೆದುಕೊಂಡು ಊರಿನಲ್ಲಿರುವುದಕ್ಕಿಂತ ಸಾಯುವುದು ಲೇಸಲ್ಲವೇ?"

"ಹಾಗೆ ಹೇಳಿ......ಮನುಷ್ಯನು ಜೀವಿಸಿರುವ ತನಕ ಆತನಿಗೆ ಹೊಟ್ಟೆಗಿಲ್ಲವಾದರೂ ಮರ್ಯಾದೆಯೊಂದು ದೊಡ್ಡದು; ಅದು ಬೇಕು. ಅದು ಹೋದರೆ ಮತ್ತು ಸತ್ತಂತೆಯೇ ಸರಿ."

"ಆ ಮಾರಪ್ಪ ಎಂತಹ ಧೀರನಾಗಿದ್ದನು? ಇದನ್ನೆಲ್ಲಾ ನೋಡಿದರೆ ಆತನ ಆತ್ಮಕ್ಕೂ ಶಾಂತಿ ದೊರೆಯದೆಂದೇ ನನಗೆ ಭಾಸವಾಗುತ್ತಿದೆ!"

"ಸಿಂಹದ ಹೊಟ್ಟೆಯಲ್ಲಿ ಕುರಿಮರಿಗಳು ಹುಟ್ಟಿದರೆ?" "ಇವು ಕುರಿಮರಿಗಳೇ! ಇಲ್ಲವಾದರೆ ಗಟ್ಟಿದೇಹದ ಜವ್ವನಿಗರು ಇವರು ಇಬ್ಬರಿದ್ದಾರೆ. ಸಾಯಬಾರದೆ ಇವರಿಗೆ? ಆ ಮಂಜಪ್ಪ ಅವನ ಎದುರಿಗೆ ಒಮ್ಮೆ ನಿಂತು ಕಣ್ಣು ಕೆರಳಿಸಿದರೆ ಅವನನ್ನು ಮತ್ತೆ ಹದಿನೈದು ದಿನ ಪತ್ತೆ ಹಚ್ಚಲಿಕ್ಕೆ ಸಾಧ್ಯವಿಲ್ಲ. ಅಂತಹ ಹೇಡಿ ಆ ಮಂಜಪ್ಪ."

"ಅಷ್ಟು ದೀರ್ಘ ಮಾತೇಕೆ? ಇವರಿಗೆ ಮಂಜಪ್ಪನ ಹೆದರಿಕೆ ಇದ್ದರೆ ನಾನು ಅವನ ಬೆನ್ನೆಲುಬು ಮುರಿಯಲು ಸಿದ್ಧನಿದ್ದೇನೆ... ನಾರಾಯಣ ಶೆಟ್ಟೂ ಹಿಂದಿನಿಂದ ಬೆಂಬಲವೀಯುತ್ತಾರೆ ಎಂದು ಈ ನೀಲಿ ಮಾಧವರಲ್ಲಿ ನಾನು ಸಾರಿ ಹೇಳಲಿಲ್ಲವೇ? ಕುರಿಗಳು ಕುರಿಗಳೇ!" "ಮಾರಪ್ಪನ ಉತ್ತರಾಧಿಕಾರವನ್ನು ಉಳಿಸಿಕೊಳ್ಳುವುದಂತೆ. ಪಾಪ—ಆ ಹುಡುಗರಿಗೆ ಎಲ್ಲಿ ಸಮಯ ಸಿಕ್ಕಬೇಕು? ಮಮ್ಮದೆಯ ಬಾಳೆಹಣ್ಣಿನ ವ್ಯಾಪಾರದಲ್ಲಿ ಸೇವೆಮಾಡಲಿದೆಯಲ್ಲಾ.....ಅವರ ಸುದ್ದಿ ಎತ್ತಬೇಡಿ....."

ಇಷ್ಟು ಹೊತ್ತಿಗೆ ಮಾತನಾಡುತ್ತಾ ಹೋಗುತ್ತಿದ್ದ ಸೋಮಯ್ಯನ ತಂಡ ಮಮ್ಮದೆಯ ಅಂಗಡಿಯನ್ನು ದಾಟಿಹೋಗಿತ್ತು. ಅವರು ಹೇಳುತಿದ್ದ ಪ್ರತಿಯೊಂದು ಮಾತನ್ನೂ ಕೇಳುತಿದ್ದ ರಾಮ ಬುಸುಗುಟ್ಟುವ ಸರ್ಪದಂತೆ ಕುಳಿತಿದ್ದವ ಕುರ್ಚಿಯಿಂದ ಎದ್ದು ನಿಂತಿದ್ದಾನೆ. ದೇಹವಿಡೀ ಕೋಪದಿಂದ ಕುದಿಯುತಿತ್ತು. ಈ ಸಿಟ್ಟಿನ ಬೆಂಕಿಗೆ ತುಪ್ಪವೆರೆಯಲು ಮಮ್ಮದೆಯ ಮಾತೂ ಸಾಕಾಗಿತ್ತು. "ನಾನು ಮೊದಲೇ ಹೇಳಲಿಲ್ಲವೇ ರಾಮಣ್ಣ.... ನಾನು ಹೇಳಿದಂತೆಯೇ ನೀವು ಅವೆಲ್ಲಾ ಸಾಮಾನ್ಯ ವಿಷಯಗಳೆಂದು ಗಾಳಿಗೆ ಬಿಟ್ಟಿರಿ. ಈಗ ಬಂತು ನೋಡಿ ಬಿರುಗಾಳಿ....." ಮಮ್ಮದೆ ಮಾತು ಮುಗಿಸಿದ.

ಅಣ್ಣ ಮಾಧವನು ಈ ಜಗಳದ ಸಂಗತಿಯನ್ನು ಗುಪ್ತವಾಗಿ ಇರಿಸಿದು ದೇಕೆಂದು ಆತನಿಗೆ ಅರಿವಾಯಿತು. ತಾಯಿ ಜಾತ್ರೆಗೆ ಹೋಗಬಾರದೆಂದು ಬಲವಂತ ಪಡಿಸಿದುದು ಏಕೆಂದು ಆತಗೆ ಈಗ ತಿಳಿಯಿತು. ಇಂತಹ ಅಂಜು ಬುರುಕರ ಮುಖಾವಲೋಕನ ಕೂಡಾ ಬೇಡವೆಂದು ರಾಮ ಬಗೆದ. ಆತನ ದೇಹವಿಡೀ ಇನ್ನೂ ಕುದಿಯುತ್ತಿದೆ. ಸೋಮಯ್ಯನ ಪರಿವಾರದವರು ಹೇಳಿ ಕೊಂಡು ಹೋಗುತಿದ್ದ ಪ್ರತಿಯೊಂದು ಮಾತೂ ಅವನ ಕಿವಿಯಲ್ಲಿ ಪ್ರತಿಧ್ವನಿ ಸುತ್ತಿದ್ದುವು. ಸಿಂಹದ ಹೊಟ್ಟೆಯಲ್ಲಿ ಸಿಂಹದ ಮರಿಗಳಲ್ಲದೆ ಕುರಿಗಳು ಹುಟ್ಟ ಲಾರವೆಂದು ತೋರಿಸಿಕೊಡುವುದಕ್ಕಾಗಿಯೇ ಆತ ಜಾತ್ರೆಯ ಬಳಿ ಓಡಾಡು ತಿದ್ದಾನೆ. ಅವನ ಪರಿವಾರದ ತಿಮ್ಮ, ಸುಬ್ಬ, ಹೊಲೆಯ ಬಟ್ಯ ಎಲ್ಲರೂ ಸ್ವಾಮಿ ಕಾರ್ಯಕ್ಕಾಗಿ ಟೊಂಕಕಟ್ಟಿ ಅವನನ್ನು ಹಿಂಬಾಲಿಸಿ ಓಡುತಿದ್ದಾರೆ.

ಜಾತ್ರೆಬಯಲಲ್ಲಿ ವಿಚಿತ್ರವಾದ ಧ್ವನಿಯೆದ್ದಿತು. ಎಲ್ಲರೂ ಭೀತಿಯಿಂದ ಅಲ್ಲಲ್ಲಿ ಓಡುತ್ತಿದ್ದಾರೆ. ರಾಮ ಜನರ ಗುಂಪಿಗೆ ಸಿಂಹದ ಮರಿಯಂತೆ ಅಟ್ಟ ಹಾಸವಿಟ್ಟು ಹಾರಿದ್ದಾನೆ. ತಮಗೆ ಸಲ್ಲುವ ಮರ್ಯಾದೆಯನ್ನು ಸೂರೆ ಗೊಳ್ಳಲು ಬಂದಿದ್ದ ಮಂಜಪ್ಪನ ಮೇಲೆ ಬಿದ್ದು ಆತನ ಕುತ್ತಿಗೆ ಹಿಸುಕುವುದ ರಲ್ಲಿದ್ದನು. ಮಂಜಪ್ಪನ ಅನುಚರರೆಲ್ಲಾ ಈ ಭಯಾನಕ ದೃಶ್ಯವನ್ನು ನೋಡಿ ಎಂದೋ ಪಲಾಯನ ಮಾಡಿದ್ದರು. ಆದರೆ ತಿಮ್ಮ, ಸುಬ್ಬ, ಬಟ್ಯರು ಹೆಗಲಿಗೆ ಹೆಗಲೊಡ್ಡಿ ರಾಮನಿಗಾಗಿ ಪ್ರಾಣಬಲಿದಾನವನ್ನೂ ನೀಡಲು ಸಿದ್ಧರಾಗಿದ್ದರು. ಮಮ್ಮದೆಯೂ ತನ್ನ ಮಿತ್ರನನ್ನು ಮರೆತಿರಲಿಲ್ಲ. ಅಂಗಡಿಯಲ್ಲಿ ಬೇರೆ ಜನ ವನ್ನು ನೇಮಿಸಿ ಜಾತ್ರೆಯ ಬಯಲಿಗೆ ಅವರೊಡನೆಯೇ ಓಡಿ ಬಂದಿದ್ದಾನೆ.

ಮಂಜಪ್ಪ ತೀರಾ ಹೇಡಿಯೆಂದು ಎಲ್ಲರಿಗೂ ಮೊದಲೇ ಗೊತ್ತು. ಆದರೆ ಬಾಯಲ್ಲಿ ಮಾತಾಡುವಾಗ ಅವನಂತಹ ವೀರಾಧಿವೀರರು ಯಾರೂ ಇರಲಾರರು. ಅದಲ್ಲದೆ ಮೃತಹೊಂದಿದ ಮಾರಪ್ಪನ ಉತ್ತರಾಧಿಕಾರಪಟ್ಟ ಅವರ ಜಾತಿಯ ಕಟ್ಟಳೆಯ ಪ್ರಕಾರ ಮಾರಪ್ಪನ ಮಕ್ಕಳಿಗೇ ಹೋಗಬೇಕಲ್ಲದೆ, ಮಂಜಪ್ಪನ ಯತ್ನವು ಅಕ್ರಮವೂ ನ್ಯಾಯಬಾಹಿರವೂ ಆಗಿತ್ತು.

ಊರಿನ ಹತ್ತುಸಮಸ್ತರೀಗ ಗುಂಪುಸೇರಿ ಪಂಚಾಯತಿಕೆ ಮಾಡೋಣವೆಂದು ಪ್ರಸ್ತಾಪವೆತ್ತಿದರು. ಕಟ್ಟಕಡೆಗೆ ತಮ್ಮ ದೂರುಗಳನ್ನು ದೈವದ ಮುಂದೆ ನಿವೇದಿಸಿಕೊಂಡರು. ದೈವದ ತೀರ್ಮಾನಕ್ಕಾಗಿ ಕುತೂಹಲದಿಂದ ನಿರೀಕ್ಷಿಸುತ್ತಾ ನಿಂತರು. ದೈವಸಂಕಲ್ಪವೀಗ ಹೊರಬಿತ್ತು. ದೈವದ ಪ್ರತಿನಿಧಿಯಾದ ಪೂಜಾರಿಯ ಬಾಯಿಂದ ಮಾತುಗಳು ನಿಧಾನವಾಗಿ ಕೇಳತೊಡಗಿದುವು.

ದೈವ ನಿರ್ಣಯದಂತೆ ಮಾರಪ್ಪನ ಉತ್ತರಾಧಿಕಾರಿ ಪಟ್ಟ ಅವನ ಎರಡನೆಯ ಮಗ ರಾಮನಿಗೆ ಸಿಕ್ಕಿತು. ಭೂತದ ಮುಂದೆ ನಿಲ್ಲುವ ಗೌರವದ ಎರಡನೆಯ ಸ್ಥಾನವನ್ನು ಇನ್ನು ಮುಂದೆ ರಾಮನೇ ಅಲಂಕರಿಸಬೇಕು. ನ್ಯಾಯಬಾಹಿರವಾದ ವರ್ತನೆಯಿಂದ ಗೌರವದ ಸ್ಥಾನವನ್ನು ಆಕ್ರಮಿಸಿದ ಮಂಜಪ್ಪನಿಗೆ ನೂರು ಹೊನ್ನು ದಂಡ ವಿಧಿಸಲಾಯಿತು.

ಬೀಡಿನ ಧನಿಗಳು ಬಳಿ ಬಂದು ರಾಮನನ್ನು ಅಪ್ಪಿಕೊಂಡರು. ರಾಮ ಶಿರಬಾಗಿ, ಬೀಡಿನ ಧನಿಯ ಕಾಲುಮುಟ್ಟಿ, ಪ್ರಣಾಮಮಾಡಿದನು.

---

## 5

ಜಾತ್ರೆಯಲ್ಲಿ ರಾಮ ಜಯಭೇರಿ ಹೊಡೆದ ಕತೆಯೀಗ ಮನೆಮಾತಾಗಿದೆ. ಜಾತ್ರೆ ಮುಗಿದು ಈಗ ಮೂರು ದಿನ ಮೀರಿದರೂ ಜಗಳದ ಸುದ್ದಿ ಇನ್ನೂ ಮುಗಿದಿಲ್ಲ. ಎಲ್ಲರ ಬಾಯಲ್ಲಿಯೂ ರಾಮನ ಗುಣಗಾನ. ನೆರೆಯ ಹೆಂಗಸರು ನೀರಿಗೆ ಬಂದವರು ನೀಲಿಯನ್ನು ಅಭಿನಂದಿಸಲು ನಿಂತಿದ್ದಾರೆ.

ನೀಲಿಗೂ ಹೆಮ್ಮೆ; ಮಾಧವನಿಗೂ ಅಷ್ಟೆ ಅಭಿಮಾನ; ಆದರೇನು? ತಮ್ಮ ಮನೆಯ ಗೌರವ ಉಳಿಸಿದ ಮಗು ರಾಮನನ್ನು ಅವರಿಬ್ಬರೂ ನೋಡದೆ ಈಗ ದಿವಸಗಳು ನಾಲ್ಕು ಕಳೆದುವು. ಜಾತ್ರೆಯ ಹಿಂದಿನ ದಿನ ಮನೆಬಿಟ್ಟ ಹುಡುಗ ಜಾತ್ರೆ ಕಳೆದು ಇಷ್ಟು ದಿನಗಳಾದರೂ ಮನೆಗೆ ಬಂದಿಲ್ಲ. ಮಾಧವ

ನೀಲಿಯರಿಗೆ ಮನದಲ್ಲಿ ನೆಮ್ಮದಿಯಿಲ್ಲ. ಎಷ್ಟೆಂದರೂ ಏನೂ ತಿಳಿಯದ ಹುಡುಗ. ಎಳೆ ಹರೆಯದ ಆವೇಶ ಬೇರೆ. ಊರಿನಲ್ಲೆಲ್ಲಾ ಅಸೂಯೆಪಡುವವರಿದ್ದಾರೆ. ಹಟಸಾಧಿಸಲಿಕ್ಕಾಗಿ ಮಂಜಪ್ಪ ಮತ್ತವನ ಸಹಚರರು ಏನಾದರೂ ಮಾಡಿಬಿಡುವರೋ ಎಂಬ ಸಂದೇಹ ಬೇರೆ.

ಮಾಧವ, ತಮ್ಮನನ್ನು ಪತ್ತೆಹಚ್ಚಿ ಮನೆಗೆ ಕರೆದುಕೊಂಡು ಬರುವೆನೆಂದು ಮನೆಬಿಟ್ಟಿದ್ದಾನೆ. ಹೊಳೆದಾಟಿ, ಹೊಲಹಾದು, ಮಮ್ಮದೆಯೊಡನೆ ವಿಚಾರಿಸಿ ಮುನ್ನಡೆಯುತ್ತಾನೆ. ದೂರದ ಮನೆಯಂಚಿನಲ್ಲಿ ಮಳಲ ದಿಣ್ಣೆಯ ಮೇಲೆ ಸೀಯಾಳ ಕುಡಿಯುತ್ತಾ ನಾಲ್ಕು ಮಂದಿ ಕುಳಿತಿದ್ದಾರೆ. ಮಾಧವನ ಬಾಯಿಂದ ಸಂತಸದ ನಗುವೊಂದು ಹೊರಸೂಸಿತು.

ಮಾಧವನನ್ನು ಕಂಡೊಡನೆ ಕುಳಿತಿದ್ದವರು ಎದ್ದುನಿಂತು ಗೌರವಿಸಿದರು. ರಾಮು ನಿಶ್ಚಿಂತನಾಗಿ ನಿಂತಿದ್ದಾನೆ. ಮಾಧವನ ಕಣ್ಣಲ್ಲಿ ಕಂಬನಿದುಂಬಿತು. ತಮ್ಮನನ್ನು ಎರಡೂ ಕೈಗಳಿಂದ ಬಿಗಿಯಾಗಿ ಅಪ್ಪಿ, ಕಣ್ಣೀರಿಟ್ಟ. ತಮ್ಮ ಮನೆಯ ಮರ್ಯಾದೆಯುಳಿಸಿದ ಮಗುವೆಂದು ರಾಮುನ ಕೆನ್ನೆ ಸವರಿದ. ಮನೆಗೆ ಹೋಗೋಣವೆಂದು ಅಕ್ಕರೆಯಿಂದ ಕರೆದ.

ರಾಮು ಈ ತನಕ ಮನೆಗೆ ಹೋಗದಿದ್ದುದಕ್ಕಾಗಿ ಮರುಗಿಕೊಂಡ. ಈ ಎಲ್ಲಾ ದಿನಗಳಲ್ಲಿಯೂ ಅವನಿಗೆ ತನ್ನ ಸ್ನೇಹಿತರ ಮನೆಯಲ್ಲಿಯೇ ಊಟ ಉಪಚಾರ. ಅಣ್ಣನೊಡನೆ ಕ್ಷಮೆ ಯಾಚಿಸಿಕೊಂಡ, ಅಮ್ಮ ನೀಲಿಯ ಕ್ಷೇಮವನ್ನು ವಿಚಾರಿಸಿಕೊಂಡ. ತನಗಾಗಿ ಪ್ರಾಣ ಬಲಿದಾನವೀಯಲು ಬಂದ ತನ್ನ ಗೆಳೆಯರಾದ ತಿಮ್ಮ, ಸುಬ್ಬ, ಹೊಲೆಯ ಬಟ್ಯರನ್ನೂ ತನ್ನ ಮನೆಗೆ ಬರಲು ಆಹ್ವಾನಿಸಿದ.

ನೀಲಿಗೆ ಎಲ್ಲಿಲ್ಲದ ಹುರುಪು. ಗೆದ್ದು ಬಂದ ಮಗನನ್ನು ಸ್ವಾಗತಿಸಿದ್ದಾಳೆ. ಅವನಿಗೆ ನೆರವುನೀಡಿದ ಆ ಮೂರುಮಂದಿ ತನ್ನ ಬಸಿರಿಂದಲೇ ಬಂದವರೆಂದು ಹೇಳಿಕೊಳ್ಳುತ್ತಾಳೆ. ಎಂತಹ ಸಂಭ್ರಮ! ಎಲ್ಲರನ್ನೂ ಸಾಲಿಗೆ ಕುಳ್ಳಿರಿಸಿ ಅನ್ನ ಬಡಿಸಿದಳು. ಹಿರಿತನದ ಹಕ್ಕಿನಿಂದ ಮಾಧವ ಮೊದಲು ಕೂರಬೇಕು. ಸುಬ್ಬ ತಿಮ್ಮರು ಸರಿಜಾತಿಯವರಲ್ಲ. ಆದರೆ ಜಾತೀಯತೆಯ ಸಂಕುಚಿತ ಮನೋಭಾವನೆಯು ಅಲ್ಲಿ ಮೂಡಲಿಲ್ಲ. ಬಟ್ಯನಂತೂ ಹೊಲೆಯರವನು. ಮನೆಯೊಳಗೆ ಅವನಿಗೆ ಪ್ರವೇಶಕೊಡುವಷ್ಟು ದೂರ ನೀಲಿ ಹೋಗಲಿಲ್ಲ. ಎಷ್ಟೆಂದರೂ ಅಪ್ಪ ನಟ್ಟ ಆಲದಮರವಲ್ಲವೇ ಅದು? ಸಂಪ್ರದಾಯದ ಮಮತೆ

ಅಷ್ಟುಬೇಗ ಮಾಯುವಾಗಬಲ್ಲುದೇ? ಕಟ್ಟಕಡೆಗೆ ಎಲ್ಲರೂ ಅಂಗಳದಲ್ಲಿ ಒಂದೇ ಹಂತಿಯಿಟ್ಟು ಕುಳಿತರು. ಬಟ್ಯನು ತಾನು ಅಸ್ಪೃಶ್ಯನಾಗಿದ್ದು ಕೊಂಡು ಅವರೊಡನೆ ಕೂತುಕೊಳ್ಳನೆಂದು ನುಡಿದರೂ ರಾಮನ ಬಲವಂತದಿಂದ ಕುಳಿತುಕೊಳ್ಳಲೇಬೇಕಾಯಿತು. ವಂಚನೆ, ಕಪಟವನ್ನು ಏನೇನೂ ಅರಿಯದ ಗೆಳೆತನವದು. ಎಲ್ಲರೂ ಉಂಡು ನಲಿದರು. ಸುಬ್ಬ, ತಿಮ್ಮರು, ಎಂತಹ ಪರಿಸ್ಥಿತಿಯಲ್ಲಿಯೂ ರಾಮನಿಗೂ ಅವನ ಮನೆಯವರಿಗೂ ತಮ್ಮ ಕೈಲಾದ ನೆರವು ನೀಡುವೆವೆಂದು ಪಣತೊಟ್ಟರು. ಹೊಲೆಯ ಬಟ್ಯ, ರಾಮನ 'ಬೆವರು ಬಿದ್ದಲ್ಲಿ, ತನ್ನ ನೆತ್ತರು ಬೀಳುವುದೆಂದು'* ಭೀಷ್ಮ ಪ್ರತಿಜ್ಞೆ ಮಾಡಿಕೊಂಡನು.

ಬಯಲಲ್ಲಿ ನೀರು ಆರಿದೆ. ಜಾತ್ರೆಯಂತೂ ಮುಗಿಯಿತು. ರಾಮನೀಗ ಆಲಸ್ಯದಿಂದ ಕಾಲಕಳೆಯಬಾರದು. ಮಾಧವ, ರಾಮು, ಸುಬ್ಬ, ತಿಮ್ಮ, ಬಟ್ಯ ಎಲ್ಲರೂ ಗದ್ದೆಗೆ ನೀರುಹಾಕಲು ತೆರಳಿದರು.

ಹೊಲದಿಂದ ಮನೆಗೆ ಹಿಂದಿರುಗಿದಾಗ ಬೀಡಿನ ಧನಿಯ ದೂತ ರಾಮನಿಗಾಗಿ ಕಾದಿದ್ದ. ನೀಲಿ ಏಕಾಗಿರಬಹುದೆಂದು ತವಕಗೊಂಡಳು. ವಕ್ಕಲೆದ್ದು ಹೋಗಬೇಕೆಂದು ಆಣತಿ ಮಾಡಿರಬಹುದೇ? ಜಾತ್ರೆಯಲ್ಲಿ ಮಾಡಿದ ಗಲಭೆಗಾಗಿ ಏನಾದರೂ ಮುನಿದುಕೊಂಡಿರಬಹುದೇ? ಆಕೆ ಅದರ ಕುರಿತು ದೂತನಲ್ಲಿ ವಿಚಾರಿಸಿದರೆ, "ಯಾವುದೋ ಏನೋ? ನನಗೇನು ಗೊತ್ತು? ಕೂಡಲೆ ಬರಲು ಹೇಳಿದ್ದಾರೆ" ಎನ್ನುತ್ತಾನೆ.

ರಾಮು ಅವಸರವಾಗಿ ಪೋಷಾಕುಮಾಡಿಕೊಂಡು ದೂತನೊಡನೆ ಧನಿಗಳ ಭೇಟಿಗಾಗಿ ಹೆಜ್ಜೆಹಾಕಿದ.

ರಾಮನಿಗೆ ಅತಿರೇಕವಾದ ಆಶ್ಚರ್ಯ! ಇಷ್ಟರತನಕ ಧನಿಗಳ ಮನೆಯಲ್ಲಿ ದೊರೆತಿರಲಾರದ ಸತ್ಕಾರ ಇಂದವನಿಗೆ ಕಾದಿತ್ತು. ಧನಿಗಳು ತುಂಬಾ ಗುಣವಂತರು. ಇವರ ತಂದೆ, ಹಿಂದೆ ಬೀಡಿನ ಧನಿಗಳಾಗಿ ಭಾರೀ ಕಾರುಬಾರು ಮಾಡಿದವರು. ಅವರು ನಿಧನಹೊಂದಿದಾಗ ಇವರಿಗೆ ಕೇವಲ ಹದಿನಾಲ್ಕು ವರ್ಷ ಪ್ರಾಯ. ಅನಂತರ ಆಸ್ತಿಯ ಸರ್ವ ಹೊಣೆಗಾರಿಕೆಯೂ ಇವರ ಮೇಲೆಯೇ ಬಿತ್ತು. ಬೀಡಿನ ಆಸ್ತಿಯೆಂದರೆ ಏನು ಚಿಲ್ಲರೆ ಆಸ್ತಿಯೇ? ಹತ್ತು ಗ್ರಾಮಗಳಲ್ಲಿ ಆಸ್ತಿ ಹರಡಿಕೊಂಡಿದೆ. ಇದರ ವ್ಯವಸ್ಥೆ ನೋಡಿಕೊಂಡು

---

* ದಕ್ಷಿಣಕನ್ನಡದ ಹಳ್ಳಿಗಳಲ್ಲಿ ಈಗಲೂ ಉಪಯೋಗಿಸುವ ಒಂದು ನುಡಿಗಟ್ಟು. ಸ್ವಾಮಿಕಾರ್ಯಕ್ಕಾಗಿ ತಾನು ಜೀವವನ್ನೇ ಅರ್ಪಿಸುವೆನು ಎಂದರ್ಥ.

ಜನಪ್ರೀತನೆನಿಸಿಕೊಳ್ಳುವುದು ಸಣ್ಣ ಕೆಲಸವೇನೂ ಅಲ್ಲ. ತಂದೆ ಗಳಿಸಿಕೊಂಡಿದ್ದ ಪ್ರೀತಿ ಮಗನೂ ಗಳಿಸಿಕೊಂಡರು.

ರಾಮು ಬಂದುದನ್ನು ನೋಡಿ ಆದರದಿಂದ ಬರಮಾಡಿಕೊಂಡರು. ತನ್ನ ಸಮುಸಾಲಿನಲ್ಲಿ ಆತನನ್ನು ಕುಳ್ಳಿರಿಸಿಕೊಂಡು ಮಾತುಕತೆಗೆ ತೊಡಗಿದರು.

"ನೋಡಪ್ಪಾ ರಾಮು, ನಿನ್ನ ಅಯ್ಯ ಮಾರಪ್ಪನೆಂದರೆ ನಮ್ಮ ತಂದೆಯವರಿಗೆ ಮೆಚ್ಚುಗೆಯ ಬಲಗೈ ಬಂಟನಾಗಿದ್ದನಂತೆ . . . ."

"ಹೌದು ಧನೀ—ಅಮ್ಮ ನೀಲಿಯೂ ಅದನ್ನೇ ಹಲವು ಬಾರಿ ಹೇಳಿಕೊಳ್ಳುತ್ತಾಳೆ . . ."

"ಯಾವ ಕೆಲಸಕ್ಕೂ ತಂದೆಯವರಿಗೆ ಮಾರಪ್ಪನಿಲ್ಲದೆ ಸಾಗುತ್ತಿರಲಿಲ್ಲ. ನನ್ನ ತಂದೆಯವರು ಕೊನೆಯುಸಿರೆಳೆಯುವಾಗ ಮಾರಪ್ಪನನ್ನು ಬಳಿಗೆ ಕರೆದು ಅವರ ಕಾಲ ಬಳಿ ಅಳುತ್ತಾ ಕುಳಿತಿದ್ದ ಹದಿನಾಲ್ಕು ಹರಯದ ನನ್ನನ್ನು ತೋರಿಸಿ, ಮಾರಪ್ಪಾ ನನ್ನ ಮಗುವನ್ನೂ ನನ್ನಂತೆಯೇ ನೋಡಿಕೋ . . . ಬೆನ್ನುಬಿಡದೆ ಸೇವೆಮಾಡಿದೆಯಾದರೆ ಆತನೂ ನಿನ್ನನ್ನು ಮರೆಯಲಾರನೆಂದು ನನಗೆ ನಂಬಿಕೆಯಿದೆ ಎಂದಿದ್ದರಂತೆ."

"ಅವರಿಬ್ಬರ ದಿನವೂ ಕಳೆದುಹೋಯಿತು . . . . . ." ಮುಂದೆ ರಾಮುನೆಷ್ಟು ಪ್ರಯತ್ನಿಸಿದರೂ ಮಾತುಗಳೇ ಬರದಾದುವು.

ರಾಮು ಮತ್ತು ರಾಮುನ ಧನಿ ಇಬ್ಬರ ಕಂಠವೂ ಬಿಗಿಯಿತು. ಈರ್ವರೂ ತಮ್ಮ ತಮ್ಮ ತಂದೆಯವರ ನೆನಪು ತಂದು ಕಂಬನಿಗರೆದರು. ಧನಿಯವರು ತುಸು ಹೊತ್ತಿನಲ್ಲಿ ದೀರ್ಘವಾದ ನಿಟ್ಟುಸಿರಿಟ್ಟು ಇತ್ತೀಚೆಗೆ ಜಾತ್ರೆಯ ಜಗಳದಲ್ಲಿ ರಾಮುನ ಸಾಹಸವನ್ನೂ ಎದೆಗಾರಿಕೆಯನ್ನೂ ಕೊಂಡಾಡಿದರು.

ಬೀಡಿನ ಅಡುಗೆಯ ಮಾಣಿ ಮುಖತೊಳೆಯುವುದಕ್ಕಾಗಿ ನೀರು ತಂದಿರಿಸಿದ. ಫಲಾಹಾರದಿಂದ ತುಂಬಿದ ತಟ್ಟೆ, ಕಾಫಿ ಬಂದುವು. ಕುಡಿಯುತ್ತಿದ್ದಂತೆಯೇ ಧನಿಗಳು ತಮ್ಮ ಮಾತು ಮುಂದುವರಿಸಿದರು.

"ರಾಮೂ—ನೀನೆಷ್ಟು ಕಲಿತೆ? ಹೈಸ್ಕೂಲಿಗೆ ಹೋಗುತ್ತಿದ್ದೆ—ನನಗೆ ಗೊತ್ತು" ಧನಿಗಳು ವಿಚಾರಿಸಿದರು.

ರಾಮುನ ಕಣ್ಣಲ್ಲಿ ಇನ್ನೊಮ್ಮೆ ಗಂಗಾಯಮುನೆಯರು! ಇದರಲ್ಲೇನೋ ರಹಸ್ಯವಿದ್ದೇ ಇರಬೇಕು. ರಹಸ್ಯ ಮಾತ್ರವಲ್ಲ—ಕಠೋರ ಸತ್ಯವೂ ಅಡಗಿತ್ತು. ರಾಮುನ ಸಾಲೆಯ ಕುರಿತು ಪ್ರಶ್ನೆ ಬಂದಾಗ ಒಮ್ಮೆಲೇ ರಾಮು

ನಿಗೆ ತೀರಿದ ತನ್ನ ತಂದೆಯು ನೆನಪಾಗುತ್ತಿದೆ. ತನ್ನ ಸಾಲೆಯು ಕುರಿತು ಆತ ಪಡುತಿದ್ದ ಹೆಮ್ಮೆ, ತನ್ನನ್ನು ಮೆಟ್ರಿಕು ತನಕ ಓದಿಸಿ ಮುಂದೆ ತನ್ನ ಭವಿತವ್ಯದ ಕುರಿತು ಏನೇನೋ ಕನಸು ಕಾಣುತ್ತಿದ್ದುದು, ರಾಮನ ಸ್ಮರಣೆಗೆ ಬಾರದೆ ಹೋದೀತೆ? ಶ್ರೀಮಂತ ಜನರ, ಸರಕಾರಿ ನೌಕರರ ಮಕ್ಕಳೊಡನೆ ಸಾಲೆಯಲ್ಲಿ ತನಗಿದ್ದ ನೇಹವೆಲ್ಲಿ? ಈಗ ಹೊಲದ ಹೊಲೆಯ ಬಟ್ಯ, ತಿಮ್ಮ, ಸುಬ್ಬರ ನೇಹ ವೆಲ್ಲಿ? ಇವೆಲ್ಲವೂ ಆತನನ್ನು ಮಂಕು ಮಾಡಿದುವು. ಮೌನದಲ್ಲಿಯೇ ಹೀಗೆ ಬಹಳ ಹೊತ್ತು ಹೋದುದು ತನ್ನ ಗೋಚರಕ್ಕೆ ಬಂದಾಗ ಒಮ್ಮೆಲೇ ಎಚ್ಚರ ತಪ್ಪಿದಂತಾಗಿ ಧನಿಗಳು ಕೇಳಿದ ಪ್ರಶ್ನೆಗೆ ತಾನು ಉತ್ತರ ಕೊಡಲಿಲ್ಲ ಎಂಬ ನೆನಪಾಯಿತು ರಾಮುನಿಗೆ; ಆದರೆ ಇಷ್ಟರೊಳಗೆ ಧನಿಯವರು ಕೇಳಿದ ಪ್ರಶ್ನೆ ಏನೆಂದೂ ಆತನಿಗೆ ಮರೆತು ಹೋಗಿತ್ತು. ಆದರೂ ಕಣ್ಣೊರಸಿಕೊಂಡು ತನ್ನ ಸಂತಾಪ ಧನಿಗೆ ತಿಳಿಯದಿರಲೆಂದು ಹಸನ್ಮುಖಿಯಂತೆ ನಟಿಸಿಕೊಂಡ.

"ಹೌದು ರಾಮೂ. ನಿನ್ನ ಮರುಕ ನಾನು ಬಲ್ಲೆ. ಪಾಪ, ನಿನ್ನಪ್ಪ ನಿರುತ್ತಿದ್ದರೆ ನೀನು ಇನ್ನೂ ಕಲಿಯುತ್ತಿದ್ದೆ. ನೀನು ಪಟ್ಟಣದ ಸಾಲೆಗೆ ಹೋಗುತ್ತಿದ್ದುದು ನನಗೆ ಗೊತ್ತಿದೆ. ಇಂಗ್ಲಿಷು ಕಲಿತಿರುವಿ. ನೋಡು— ನಮ್ಮ ಮನೆವಾರ್ತೆ* ನೋಡುವ ಶ್ಯಾನುಭಾಗರು ಇತ್ತೀಚೆಗೆ ತೀರಿಹೋದುದು ನಿನಗೆ ಗೊತ್ತಿರಬಹುದು. ನಾನೀಗ ಆ ನೌಕರಿಯನ್ನು ನಿನಗೀಯಲು ನಿಶ್ಚ ಯಿಸಿರುವೆನು."

ರಾಮನ ಸಂತಸ ಮತ್ತೆ ಹೇಳಬೇಕೆ? ಬಯಲಿಗೋಡಿ ಹೊಲಕ್ಕೆ ನೀರೆರೆವ ಶಿಕ್ಷೆ ಇನ್ನು ತಪ್ಪಿತೆಂದು ಆತ ಸಂತಸಗೊಂಡ. ಆ ನೌಕರಿ ಮಾಡಿದರೆ ಎಷ್ಟು ಪಡಿ ಕೊಡುವಿರೆಂದು ವಿಚಾರಿಸುವ ಗೊಡವೆಯೂ ರಾಮುನಿಗಿಲ್ಲ. ಪಡಿ ಎಷ್ಟಾದರೂ ಪರವಾ ಇಲ್ಲ. ಗೌರವದ ನೌಕರಿಯಲ್ಲವೇ? ಊರ ನೂರಾರು ಒಕ್ಕಲುಗಳಿಗೆ ತಾನೊಬ್ಬ ಶ್ಯಾನುಭಾಗನಲ್ಲವೆ? ಕಲಿತ ವಿದ್ಯೆಗೆ ತಕ್ಕ ಗೌರವ ದೊರೆಯಿತು.

ಮರುದಿನವೇ ಕೆಲಸಕ್ಕೆ ರಾಮಣ್ಣ ಹಾಜರಾಗಿದ್ದಾನೆ. ಬೀಡಿನ ಶ್ಯಾನುಭಾಗರ ಗೌರವಕ್ಕೆ ಸರಿಯಾದ ಪೋಷಾಕುಗಳನ್ನು ಮಾಡಿಸುವುದಕ್ಕಾಗಿ ಧನಿ ನೂರು ಹೊನ್ನು ಸುರಿದಿದ್ದಾರೆ. ಶ್ಯಾನುಭಾಗರಿಗೆಂದು ಬೀಡಿನಲ್ಲೆ ಕೊಠಡಿ ಯೊಂದು ಕಚೇರಿಯಾಗಿ ತೆರೆಯಲ್ಪಟ್ಟಿತು. ಅಲ್ಲಿ ರಾಮಣ್ಣನ ಸಕಲ

---

* ಆಸ್ತಿಯ ವ್ಯವಸ್ಥೆ ನೋಡುವ ಎಂದರ್ಥ.

ಶಿಕಾರ್ದುಗಳು. ಒಕ್ಕಲುಗಳು ಬಂದು ಗೇಣಿ ಸಂದಾಯಮಾಡಿ ರಶೀದಿ ಪಡಕೊಳ್ಳಬೇಕು. "ಮಳೆ ಬಾರದೆ, ಬೆಳೆ ಇಲ್ಲದೆ, ಈ ಸಲ ಗೇಣಿ ಸಂದಾಯ ಮಾಡಲು ಶಕ್ಯತೆ ಇಲ್ಲ, ಬರುವ ಕೊಯ್ಲು ಮುಗಿದು ಅಳೆಯುತ್ತೇವೆ" ಎಂಬ ರೈತರ ದೂರುಗಳನ್ನು ಕೇಳುವವನೂ ಆತನೆ. ಸಂದರ್ಭ ನೋಡಿ ಎಲ್ಲವನ್ನೂ ಆತ ಧನಿಗಳಿಗೆ ನಿವೇದಿಸುತ್ತಾನೆ. ಆದರೆ ಧನಿಗಳು ಎಲ್ಲಾ ಕೆಲಸಗಳನ್ನು ಶ್ಯಾನುಭಾಗರಿಗೇ ಬಿಟ್ಟುಬಿಡುತ್ತಾರೆ. ಒಕ್ಕಲುಗಳೊಳಗೆ ಜಗಳವೆದ್ದರೆ ದೂರು ಶ್ಯಾನುಭಾಗರ ಬಳಿಗೆ. ಇತ್ತಂಡದವರನ್ನೂ ಬೀಡಿಗೆ ಬರಿಸಿ ವಾದಿ ಪ್ರತಿವಾದಿ ಯರನ್ನು ವಿಚಾರಿಸಿ, ಸಾಕ್ಷಿಗಳನ್ನು ಕೇಳಿ ಸರಿಯಾದ ನ್ಯಾಯವನ್ನು ಶ್ಯಾನು ಭಾಗರೇ ನೀಡುತ್ತಾರೆ.

ರಾಮಣ್ಣನ ಕೀರ್ತಿ ಇಷ್ಟರಲ್ಲೇ ಊರಲ್ಲೆಲ್ಲಾ ಹಬ್ಬದೆ ಇರುವುದೇ. ಎಂತಹ ಉತ್ತಮ ದೆಸೆಯಪ್ಪಾ ಆ ಹುಡುಗನಿಗೆ ಎಂದು ಹಳ್ಳಿಯ ಹಳಬರು ಆಡಿಕೊಂಡರು. ರಾಮಣ್ಣನ ಗುಣ ನಡತೆಯನ್ನೂ ಅವನಿಗೆ ಬೀಡಿನಲ್ಲಿ ದೊರೆತ ಹೊಸ ನೌಕರಿಯನ್ನೂ ಕೇಳಿದ ಪಟ್ಟಣದ ಜಾತಿಯವರೊಬ್ಬರು ಮದುವೆಯ ಪ್ರಸ್ತಾಪವೆತ್ತಿಕೊಂಡು ಬಂದರು. ಬೀಡಿನ ಧನಿಯವರಿಗೆ ವಿವಾಹವಾದುದು ಅವರ ಊರಿನಿಂದಲೆ. ಈ ಪರಿಚಯದಿಂದ ಧನಿಯವರ ಮಾವನಿಂದ ಪತ್ರವೊಂದು ಬರೆಸಿಕೊಂಡು ನೆಂಟರು ಬಂದವರೇ ನೆಟ್ಟಗೆ ಬೀಡಿಗೇ ಹೋಗಿ ಧನಿಯವರಿಗೇ ಪ್ರಥಮ ಭೇಟಿಮಾಡಿದರು. "ಹೇಗಾದರೂ ಈ ಕೆಲಸ ನಿಮ್ಮಿಂದಲೇ ಆಗಬೇಕು ಸ್ವಾಮಿ" ಎಂದು ಅಂಗಾಲಾಚಿ ಕೇಳಿ ಕೊಂಡರು. ತನ್ನ ಪತ್ನಿಯ ಊರವರು, ಮಾವನಿಂದ ಒತ್ತಾಯದ ಪತ್ರ ಬೇರೆ, ಹೀಗಿರುವಾಗ ಧನಿಯವರು ಆಶ್ವಾಸನೆ ಕೊಡದೆ ಇರಬಹುದೇ?

ರಾಮಣ್ಣನನ್ನು ಧನಿಯವರೇ ಕೇಳಿದರು. ತಾಯಿ ನೀಲಿಯನ್ನೂ ಅಣ್ಣ ಮಾಧವನನ್ನೂ ಕರೆಸಿ ಕೇಳಿರೆಂದು ಧನಿಯವರಿಗೆ ರಾಮಣ್ಣ ಉತ್ತರ ಹೇಳಿದ.

ಮಾಧವ, 'ಹುಡುಗಿಯ ರೂಪ ಲಾವಣ್ಯಗಳು ಚೆನ್ನಾಗಿರಬೇಕೆ'ಂದ.

"ಪೇಟೆಯ ಹುಡುಗಿ ರೂಪದಲ್ಲಿ ಕಪ್ಪೆ ಮಾಧವಾ? ಅಪ್ಸರೆ ಸ್ತ್ರೀಯಂತಿ ರುವಳು. ನೀನು ದೇವೇಂದ್ರನ ಪತ್ನಿ ಶಚಿಯನ್ನು ನೋಡಿದ್ದರೆ ಅವಳ ತಂಗಿಯೇ ಇವಳು ಎನ್ನಬಹುದಿತ್ತು" ಎಂದು ಹುಡುಗಿಯನ್ನು ತಾವೂ ನೋಡದವರಾಗಿದ್ದರೂ ನೋಡಿದವರಂತೆಯೇ ಧನಿಗಳು ನುಡಿದು ಬಿಟ್ಟರು. ಅಂತೆಯೇ ಅಲ್ಲಿದ್ದವರೆಲ್ಲರೂ ಧನಿಗಳು ಈ ಹುಡುಗಿಯನ್ನು ಮಾತ್ರವಲ್ಲ— ದೇವೇಂದ್ರನ ಶಚಿಯನ್ನೂ ನೋಡಿದವರಿರಬೇಕೆಂದು ಎಣಿಸಿಕೊಂಡರು.

ಈಗ ನೀಲಿಯ ಸರದಿ. ರೂಪ ಹೇಗೂ ಇರಲಿ. ಗುಣ ಚೆನ್ನಾಗಿದ್ದ ರಾಯಿತು. ಎನ್ನುತ್ತಾಳೆ ನೀಲಿ. ಮುಂದೆ ರಾಮನಂತೆ ವಿದ್ಯೆ ಕಲಿತಿರ ಬೇಕು. ಅವಳ ಶರ್ತಗಳು ಇವು ಎರಡಲ್ಲದೆ ಮೂರಿಲ್ಲ.

"ಗುಣದಲ್ಲಿ ನಿನ್ನಿಂದಲೂ ಮಿಗಿಲವ್ವಾ ನೀಲಿ" ಎಂದು ಧನಿ ವಾದಿಸಿ ದರು. ವಿದ್ಯೆಯ ಮಟ್ಟಿಗೆ ಹೇಳುವುದಾದರೆ ಹುಡುಗಿ ಪೇಟೆಯ ಮಾಧ್ರಿ ಸಾಲೆಯಲ್ಲಿ ಎಂಟನೆಯ ತರಗತಿ ಓದಿದ್ದಾಳೆ. ಹುಡುಗಿಯರಿಗೆ ಅಷ್ಟೆ ವಿದ್ಯೆ ಸಾಕೆಂದು ಹೆತ್ತವರು ಸಾಲೆ ಸಾಕುಮಾಡಿದರಂತೆ. ಹುಡುಗಿ ಇನ್ನೂ ಕಲಿಯ ಬೇಕೆಂದು ಹಟ ಹಿಡಿದಳು. ಮಾಧ್ರಿ ಸಾಲೆಯಿಂದಲೂ ಅವಳು ಇನ್ನೂ ಸ್ವಲ್ಪ ಕಲಿಯಲಿ ಎಂಬ ಪತ್ರ ಬಂತು. ಕಟ್ಟಕಡೆಗೆ ಸಾಲೆ ಸಾಕೆಂದೇ ನಿರ್ಧಾರವಾಗಿ ಸ್ವಲ್ಪ ಸಂಗೀತ, ಸ್ವಲ್ಪ ಕಸೂತಿ ಖಾಸಗಿಯಾಗಿ ಕಲಿತಿದ್ದಾಳೆ. ಕಸೂತಿಯಲ್ಲಂತೂ ಹುಡುಗಿಯದು ಎತ್ತಿದ ಕೈ. ಅವಳು ಹೆಣೆದ ಕಸೂತಿ ಕೆಲಸಗಳು ಒಂದು ಚಿಕ್ಕ ಪ್ರದರ್ಶನಕ್ಕೆ ಸಾಕೆಂದು ಎಲ್ಲರೂ ಹೇಳುತ್ತಾರೆ. ಇಷ್ಟೆಲ್ಲಾ ಯೋಗ್ಯತೆಗಳಿರುವಾಗ ಮತ್ತೆ ವಾದಕ್ಕೆ ಎಲ್ಲಿ ಎಡೆ? ಎಲ್ಲರೂ 'ಹೂಂ' ಎಂದರು.

ಬೀಡಿನ ಶ್ಯಾನುಭಾಗರ ಮದುವೆಯಲ್ಲವೆ? ಬೀಡಿನಲ್ಲೇ ಜರಗಬೇಕೆಂದು ಧನಿಗಳು. ಶ್ಯಾನುಭಾಗರ ಮದುವೆಯೆಂದರೆ ಹೇಳಬೇಕೆ ಲಲ್ಲೆ? ಕಾಯಿ ಪಲ್ಯ ತರಕಾರಿಗಳು ಹೊರೆಹೊರೆಯಾಗಿ ಬರತೊಡಗಿದುವು.

ಮದುವೆಯಂತೂ ವಿಜ್ರಂಭಣೆಯಿಂದ ಬೀಡಿನಲ್ಲೇ ಜರಗಿತು. ಮದು ವೆಯ ಮುಹೂರ್ತ ಸನ್ನಿಹಿತವಾದಾಗ ನೀಲಿ ಬಿಕ್ಕಿ ಬಿಕ್ಕಿ ಅಳುತಿದ್ದಳು. ಪಾಪ, ಆ ಹಳ್ಳಿಯ ಮುದುಕಿ ತನ್ನ ಗಂಡನನ್ನು ನೆನೆದು ಅಳುತಿದ್ದಾಳೆ. ಮಾರಪ್ಪನಿರುತಿದ್ದರೆ ಆತನೊಡನೆ ಆ ತುಂಬಿದ ಸಭೆಯಲ್ಲಿ ಆಕೆ ಬೇರೆಯೇ ನೀಲಿಯಾಗಿ ತೋರಬಹುದಿತ್ತು.

ಮದುವೆ ಮುಗಿದು ಜನಸ್ತೋಮ ಚದರಿತು. ಅದೇ ಸಂಜೆ ನೆಂಟ ರಿಷ್ಟರೂ ವಧೂವರರೂ ತನ್ನ ಮನೆಗೆ ಬರಬೇಕೆಂದು ನೀಲಿ ನಿಶ್ಚಯಿಸಿದಳು. ನೆರೆಮನೆಯ ಹೆಂಗಸರೆಲ್ಲಾ ಬಂದು ಅಡುಗೆಯ ಕಾರ್ಯದಲ್ಲಿ ನೀಲಿಗೆ ನೆರವು ನೀಡಿದರು.

---

## 6

ರಾಮನ ಪತ್ನಿಯಾಗಿ ಬಂದವಳು ಇನ್ನೂ ಎಳೆ ಹರೆಯದ ಬಾಲೆ. ಏನೋ ಕಳೆದ ಮಾಯಿ* ತಿಂಗಳು ಹೋಗುವಾಗ ಮೈನೆರೆತುದಂತೆ. ಹರೆಯ ಹದಿನಾರು ಮೀರದೆಂದು ನೋಡಿದವರು ಹೇಳಿಕೊಂಡರು. ನಾಗಿ ಎಂದು ತವರು ಮನೆಯಲ್ಲಿ ಕರೆಯುತ್ತಿದ್ದರು. ಮದುವೆಯ ಸಮಯದಲ್ಲಿ ಆಕೆ ನಾಗವೇಣಿಯಾದಳು. ನಾಗಿ ಅತ್ತೆಯ ಕಾಲು ಹಿಡಿದು ಪ್ರಣಾಮ ಮಾಡಿದಳು. ಅತ್ತೆ ಎರಡು ಕೈಗಳಿಂದಲೂ ಸೊಸೆಯ ತಲೆಸವರಿ 'ಸಾವಿರ ಕಾಲ ಬಾಳಮ್ಮ' ಎಂದು ಹರಸಿದಳು. ಬಾಗಿದ ನಾಗಿ ಏಳುವಾಗ ಸೀರೆಯ ಸೆರಗು ಭಾರವಾಗಿತ್ತು. ಹೊಸತಾಗಿ ಬಂದ ಸೊಸೆ ಅತ್ತೆಯ ಕಾಲುಹಿಡಿದಾಗ ಸೀರೆಯ ಸೆರಗಿನಲ್ಲಿ ನಾಲ್ಕು ಹೊನ್ನು ಕಟ್ಟುವ ವಾಡಿಕೆ.

ನಾಗಿ ನೋಡಲು ಮುದ್ದು ಮುದ್ದಾಗಿದ್ದಳು. 'ನನ್ನ ರಾಮನಿಗೆ ತಕ್ಕ ಸೀತೆ ಈಕೆ' ಎಂದು ನೀಲಿ ಹೇಳಿಕೊಂಡಳು. ಒಂದೆರಡು ದಿನಗಳಲ್ಲೆ 'ನಾಗಿ ಮನೆಗೆ ಬಂದ ಮಹಾಲಕ್ಷ್ಮಿ'ಯಾದಳು.

ರಾಮನ ಮದುವೆಯಲ್ಲಿ ಮಾಧವನ ಹೆಂಡತಿ ಕಮಲ ತುಂಬಾ ದುಡಿದಿದ್ದಾಳೆ. ಬರುವಲ್ಲಿ, ಹೋಗುವಲ್ಲಿ ಎಲ್ಲಾ ಆಕೆ ಪಟ್ಟ ಶ್ರಮ ಅಷ್ಟಿಷ್ಟಲ್ಲ. ತನ್ನ ಗಂಡನ ತಮ್ಮ ರಾಮನನ್ನು ತನ್ನ ತಮ್ಮನೆಂದೇ ಆಕೆ ಕಾಣುತಿದ್ದಳು. ಹೊಸತಾಗಿ ಮನೆಸೇರಿದ ನಾಗಿಯನ್ನು ಆದರದಿಂದ ಸ್ವಾಗತಿಸಿಕೊಂಡಳು. ಮನೆಯ ಹೊಣೆಗಾರಿಕೆ ಹೊರಲು ಇನ್ನೊಬ್ಬಾಕೆ ಇದ್ದರೆ ಆಕೆಗೂ ಒಳಿತಲ್ಲವೆ?

ಕೊಠಡಿಯೊಳಗೆ ಕುಳಿತ ನಾಗಿ ಹೊರಗೆ ಹೊರಡುವುದೇ ಬಹಳ ಅಪರೂಪ. ತನ್ನೊಡನೆ ಕೆಲಸಕ್ಕೆ ಆಗಾಗ ಬರಬಹುದೆಂದು ಎಣಿಸಿದ್ದ ಕಮಲಗೆ ಒಂದೆರಡು ದಿನ ನಿರಾಸೆಯಾಯಿತು. ಅನಂತರ ನಾಗಿಯೂ ಸಹ ಕರಿಸಿದಳು.

ನಾಗಿ ಮನೆಗೆ ಬಂದಂದಿನಿಂದ ಅತ್ತೆಗೆ ಕಮಲನ ಮೇಲೆ ಮಮತೆ ಕಡಮೆಯಾಗುತ್ತಾ ಬಂದಿತು. ಗಂಜಿಯ ಪಾತ್ರೆಯನ್ನೊಮ್ಮೆ ನಾಗಿ ಎತ್ತಲು ಹೋದಾಗ ಅತ್ತೆ ಓಡಿಬಂದು "ನಾಗೀ, ಗಂಜಿಯ ಪಾತ್ರೆಯನ್ನು ನೀನೆತ್ತ ಬಾರದಮ್ಮ—ಅದರೊಳಗಿರುವುದು ಕುದಿಯುವ ಗಂಜಿಯಲ್ಲವೇ? ಎಲ್ಲಿ

---

*ತುಳು ತಿಂಗಳುಗಳಲ್ಲಿ ಒಂದು.

ಯಾದರೂ ಮೇಲೆ ಬಿತ್ತೆಂದರೆ ಮೈ ಕೈ ಸುಟ್ಟುಕೊಳ್ಳಬೇಕಾಗುವುದು; ಅದನ್ನು ಕಮಲನೇ ಮಾಡಲಿ......" ಎಂದು ನಾಗಿಯನ್ನು ಎಳೆದು ಕೊಂಡಳಂತೆ!

ಈ ಘಟನೆ ಕಮಲನಲ್ಲಿ ಬಹುದೊಡ್ಡ ಕೋಲಾಹಲವೆಬ್ಬಿಸಿತು. ಗಂಜಿ ಪಾತ್ರೆಯನ್ನು ಅಭ್ಯಾಸವಿಲ್ಲದ ನಾಗಿ ಎತ್ತಿ ಅಜಾಗರೂಕತೆಯಿಂದ ಅನರ್ಥ ಮಾಡಿಕೊಳ್ಳುವುದಕ್ಕಿಂತ ಅಭ್ಯಾಸವಿರುವ, ಕೆಲಸವರಿತ, ಕಮಲನೇ ಮಾಡಲಿ ಎಂದು ನೀಲಿ ಎಣಿಸಿದುದಲ್ಲದೆ ತನ್ನ ಸೊಸೆಯರಲ್ಲಿ ಪಕ್ಷಾನುರಾಗ ದಿಂದ ವರ್ತಿಸಿದುದಲ್ಲ. ಆದರೆ ಕಮಲ ಬಗೆದುದೇ ಇನ್ನೊಂದಾಯಿತು.

"ನಾಗಿಯು ಮೈಮಾತ್ರ ಅಷ್ಟು ಕೋಮಲವಾದುದೇ? ಗಂಜಿ ಬಿದ್ದು ನಾಗಿಯು ಮೈ ಸುಡಬಾರದೆಂಬ ಅತ್ತೆಯ ಮುಂಜಾಗ್ರತೆ; ಅದನ್ನು ಕಮಲನೇ ಮಾಡಲಿ ಎಂಬ ಅತ್ತೆಯ ಅಧಿಕಾರವಾಣಿ ಬೇರೆ. ನನ್ನ ಮೈಚರ್ಮವೇನು ಉಕ್ಕಿನಿಂದ ತಯಾರಿಸಿದುದೇ?" ಎಂದೆಲ್ಲಾ ಎಲ್ಲರಿಗೂ ಕೇಳಿಸುವಂತೆ ಕಮಲ ದಿಗಿಲೆಬ್ಬಿಸಿದಳು. ಮಾಧವ ಬಂದವನೇ ಹೆಂಡತಿ ಕಮಲನನ್ನು ಸಾವಧಾನ ದಿಂದ ಕೊಠಡಿಗೊಯ್ದು ವಿಚಾರಿಸಿದ. "ಇಂತಹ ಸಣ್ಣ ಸಂಗತಿಗಳನ್ನೆಲ್ಲಾ ಮಹತ್ತಾಗಿ ಎಣಿಸಿಕೊಂಡರೆ ನಮ್ಮ ಸಂಸಾರದಲ್ಲಿ ವಿಷದ ಬೀಜವು ಮೊಳಕೆ ಯೊಡೆಯುವುದು" ಎಂದೆಲ್ಲಾ ಮುನಿದ ಕಮಲನನ್ನು ಶಾಂತಗೊಳಿಸಿ ತನ್ನ ನೊಡನೆ ಎಂದಿನಂತೆ ಬೀಡಿನ ಸಂಗತಿಗಳನ್ನೆಲ್ಲಾ ಕೇಳಿಕೊಂಡ.

ಬೆಳಗ್ಗಿನ ಗಂಜಿ ತಯಾರಿಸಲು ರಾತ್ರಿಯೇ ಕಮಲ ಏಳಬೇಕಿತ್ತು. ನಾಲ್ಕು ಗಂಟೆ ಹೊಡೆದಾಗ ಏಳಬೇಕಾಗಿದ್ದ ಆಕೆ ಈ ದಿನ ಆರುಗಂಟೆಯ ತನಕ ನಿದ್ರಿಸಿದ್ದಾಳೆ. ನಾಗಿ ಹತ್ತು ಗಂಟೆ ತನಕ ಗಂಡನೊಡನೆ ನಿದ್ರಿಸಿ ತಾನು ಮಾತ್ರ ರಾತ್ರೆ ಅಡುಗೆಮಾಡಲು ನಿದ್ದೆಗೆಡಬೇಕು. ಕಮಲ ಮುನಿದು ಪಾತ್ರೆಯನ್ನು ಒಲೆಯ ಮೇಲೆ ಇರಿಸಿದಾಗ ಗಂಟೆ ಎಂಟು ದಾಟಿತು.

ಊರವರು ಮನೆಗೆ ಬಂದರೆ ಮೊದಲು ಕೇಳುವುದು ಶ್ಯಾನುಭಾಗರ ಹೆಂಡತಿಯನ್ನು. ಅಕ್ಕನೆಂಬ ಹಿರಿತನದ ಹಕ್ಕಾದರೂ ಕಮಲಗೆ ದೊರಕ ಬೇಡವೆ? 'ಎಲ್ಲಿ ಸತ್ತಳೋ ನಿಮ್ಮ ಶ್ಯಾನುಭಾಗರ ಹೆಂಡತಿ' ಎಂದು ಉದ್ಗಾರ ವೆತ್ತುವಳು ಕಮಲ.

ಬಳೆ ಮಾರುವ ಹೆಂಗಸು ಬಂದಳು. "ಬಳೆ ಬೇಕೇ ಬಳೆ—ಬಣ್ಣದ ಬಳೆ..... ಚಿನ್ನದಂತಿರುವ ಬಳೆ" ಎಂದು ಮನೆ ಮುಂದೆ ಬೊಬ್ಬಿಟ್ಟಳು.

ಕಮಲ "ಇಲ್ಲಿ ನಮಗೆ ಬಳೆ ಬೇಡಮ್ಮ" ಎಂದು ಬಳೆ ಮಾರುವ ಮುದುಕಿಯನ್ನು ಕಳುಹಿಸುವುದರಲ್ಲಿದ್ದಳು. ಅಷ್ಟರೊಳಗೆ ಬಳೆ ಮಾರುವ ಮುದುಕಿಯ ಜೊತೆಯ ಚಿಕ್ಕ ಹುಡುಗಿ, ಮಧ್ಯೆ ಬಾಯಿಹಾಕಿ, "ಶ್ಯಾನುಭಾಗರ ಹೆಂಡತಿಯನ್ನು ಸ್ವಲ್ಪ ಕರೆಯುವಿರಾ ಕಮಲಕ್ಕಾ. ಅವರಿಗೆ ಬೇಕಾಗಿರಬಹುದು" ಎಂದಳು. ಎಲ್ಲಿಲ್ಲದ ಸಿಟ್ಟು ಕಮಲನನ್ನು ಮುಸುಕಿತು.

"ಸೊಕ್ಕಿದ ಹುಡುಗಿ, ಬಳೆ ಬೇಡವೆಂದಾಗ ಶ್ಯಾನುಭಾಗರ ಹೆಂಡತಿಗೆ ಬೇಕಾಗಿರಬಹುದು ಎನ್ನುತ್ತಿ; ಶ್ಯಾನುಭಾಗರ ಹೆಂಡತಿಯೇನು ಸ್ವರ್ಗಲೋಕದಿಂದ ಇಳಿದು ಬಂದವಳೆಂದು ಭಾವಿಸಿದೆಯೊ ಗಡಸುಗಾತೀ . . . . ." ಎಂದು ನುಡಿಯುತಿದ್ದಾಗಲೇ ಒಳಗಿಂದ ನಾಗಿ ಓಡೋಡಿ ಬಂದು ನಿಂತಳು. "ಏನು ಬಳೆ ತಂದಿರೇ? ಎಂತಹ ಬಳೆ ಇದೆಯಮ್ಮಾ ನಿಮ್ಮಲ್ಲಿ? ಗಾಜಿನ ಬಳೆಯೆ? ಅದು ನೋಡಿ ನಮಗೆ ಹಿಡಿಸುವುದಿಲ್ಲ. ಪೇಟೆಯಲ್ಲಿ ಬೆಳೆದವರು ನೋಡಿ—ನನಗೆ ರಬ್ಬರ್ ಬಳೆಯಿಟ್ಟೇ ಅಭ್ಯಾಸ. ಇರಲಿ, ಬಳೆ ನೀವೇ ತಯಾರಿಸುವಿರಾ? ನನಗೆ ಇಲ್ಲಿ ತಯಾರಿಸಿದುದರಲ್ಲಿ ಪ್ರೀತಿ ಕಡಿಮೆ. ಬೆಂಗಾಲ್ ಬಳೆ ಹೆಚ್ಚು ಬೆಲೆ ಬಾಳಿದರೂ ಮಾಲು ಉತ್ತಮವಾದುದು" ಎಂದು ರಾಗವೆಳೆಯುತ್ತಾ, ಕಟ್ಟಿನಲ್ಲಿದ್ದ ನಾಲ್ಕಾರು ಬಳೆ ಆರಿಸಿ ತೆಗೆದು ಹಣ ತರಲಿಕ್ಕಾಗಿ ಒಳಗೆ ನಡೆದಳು.

ಮುದುಕಿಯ ಜತೆಯ ಹುಡುಗಿ "ಕಮಲಕ್ಕಾ—ಶ್ಯಾನುಭಾಗರ ಹೆಂಡತಿಯೆಲ್ಲಿ ಎಂದು ಕೇಳಿದ ಮಾತ್ರಕ್ಕೆ ಬೈಗಳ ಮಳೆಯನ್ನೆ ಸುರಿಸಿದಿರಲ್ಲಾ. ಶ್ಯಾನುಭಾಗರ ಹೆಂಡತಿ ನಿಮ್ಮ ಹಾಗಲ್ಲ—ಬಳೆ ತೆಗೆದೇ ಬಿಟ್ಟರಲ್ಲಾ ಹ್ಹಿ ಹ್ಹಿ ಹ್ಹಿ" ಎಂದು ನಗುತ್ತಾ ಮೂದಲಿಸಿದಾಗ ಕಮಲಗೆ ಎಲ್ಲಿಲ್ಲದ ಸಿಟ್ಟೇರಿತು.

"ಮುಚ್ಚು ಮಗಳೇ—ನಿನ್ನ ನಾಲಗೆಯನ್ನು ಕತ್ತರಿಸುವೆನು. ಯಾರ ಮನೆಯಲ್ಲಿ ನೀನು ಮಾತಾಡುತ್ತಿರುವುದೆಂದು ಬಗೆದಿರುವೆ?" ಎಂದು ಕಮಲ ಹುಡುಗಿಯನ್ನು ಗದರಿಸುತ್ತಿರುವಾಗಲೇ ಹಣತರಲು ಒಳಗೆ ಹೋದ ನಾಗಿ ಹೊರಗೆ ಬಂದು "ಅವರನ್ನೇಕೆ ಬೈಯ್ಯುವಿರಿ. ಹೋಗಲಿ—ವ್ಯಾಪಾರಕ್ಕೆ ಬಂದವರು . . . ." ಎಂದಳು.

ಉರಿಯುವ ಬೆಂಕಿಗೆ ತುಪ್ಪ ಬಿದ್ದರೆ ಹೇಗೋ? ಹಾಗೆ ಕಮಲ ಉದ್ರೇಕಗೊಂಡಿದ್ದಾಳೆ. ಅವಳಲ್ಲಿ ಸಹನೆ ಇನ್ನಿಲ್ಲ.

"ಸಾಕು ನಾಗೀ . . . . ನಿನ್ನಿಂದ ಬುದ್ಧಿ ಕಲಿಯಲಿಕ್ಕಾಗಿ ಬಂದವಳಲ್ಲ.

ಜಾಗ್ರತೆ, ಇನ್ನು ಮೇಲೆ ನನ್ನ ವಿಷಯದಲ್ಲಿ ತಲೆಹಾಕಿ ಮಾತಾಡಿದೆಯಾದರೆ ನಿನ್ನ ಸ್ಥಿತಿ ನೆಟ್ಟಗಿರಲಾರದು. ಪೇಟೆಯ ಹುಡುಗಿಯರ ಸ್ವಭಾವ ಹಾಗೆಯೇ ಎಂದು ತಿಳಿದು ತಿಳಿದೂ ಸುಮ್ಮನಿದ್ದೆ, ಎಲ್ಲಾ ಗೊತ್ತು . . . . " ಎಂದು ರೋಷಾವೇಷದಿಂದ ನುಡಿಯುತಿದ್ದ ಕಮಲ ದೂರದಿಂದ ತನ್ನ ಗಂಡನ ಬರವನ್ನು ನೋಡಿ ಒಳಗೆ ನಡೆದಳು.

---

## 7

ಜಗಲಿಯ ಮೇಲೆ ಶ್ಯಾನುಭಾಗರು ಕುಳಿತು ನಾಗಿಯೊಡನೆ ಸಲ್ಲಾಪ ಮಾಡುತಿದ್ದರು, ತನ್ನ ಜೀವನದಲ್ಲಿ ಆಗಾಗ ನಡೆದುಹೋದ ಹತ್ತಾರು ಘಟನೆಗಳನ್ನು ಒಂದೊಂದಾಗಿ ನಾಗಿಗೆ ಹೇಳುತ್ತಿದ್ದರು. ಯಾವ ಹಳೆಯ ನೆನಪು ಬಂದಾಗಲೂ ಊರ ಜಾತ್ರೆಯ ಸವಿನೆನಪು ಬಾರದೆ ಹೋದೀತೆ? ಎಲ್ಲವೂ ತನ್ನ ಗೆಳೆಯರ ನೆರವಿನಿಂದಲೇ ನಡೆದುದೆಂದು ಶ್ಯಾನುಭಾಗರು ಇನ್ನೂ ಹೇಳುತ್ತಲೇ ಇದ್ದರು. ತಾನು ಶ್ಯಾನುಭಾಗನಲ್ಲ—ಇನ್ನಾವ ಪದವಿಗೇರಿದರೂ ಆ ಮೂರು ಮಂದಿ ಬಯಲ ಗೆಳೆಯರನ್ನು ಮರೆಯಲು ಸಾಧ್ಯವೇ? ಮೊನ್ನೆ ಮೊನ್ನೆ ಆರು ತಿಂಗಳ ಹಿಂದೆ ತಿಮ್ಮನ ಮಡದಿ ಕಾಡಿನಲ್ಲಿ ಹಾವು ಕಡಿತದಿಂದ ಸತ್ತುಹೋದಳು. ಹದಿನೆರಡು ವರ್ಷದ ಆ ಒಬ್ಬ ಮಗನನ್ನು ಬಿಟ್ಟರೆ ತಿಮ್ಮನ ಸಂಸಾರ ಸೊನ್ನೆ. ಎಂತಹ ಸಂಧಿಗ್ಧ ಪರಿಸ್ಥಿತಿಯಲ್ಲಿಯೂ ಗಂಡನೊಡನೆ ಹೆಗಲೊಡ್ಡಿ ದುಡಿದು ಸಂಸಾರ ಸಾಗಿಸಿದ ಆ ಪತಿವ್ರತೆಯೂ ಕಣ್ಣುಮುಚ್ಚಿಕೊಂಡಳು. ಈ ಹಟಮಾರಿ ಹುಡುಗ ನಿಂಗನ ಬುದ್ಧಿಯಂತೂ ಏನು ಮಾಡಿದರೂ ಸರಿ ಬರುವಂತಿಲ್ಲ. ದೊಡ್ಡವರ ಮಕ್ಕಳೊಡನೆ ಜಗಳಮಾಡಿ ತಿಮ್ಮನ ಹೆಸರನ್ನು ಕೆಡಿಸುತ್ತಾನೆ. ಏನೂ ಕೆಲಸವಿಲ್ಲದೆ ಮಾರ್ಗದಲ್ಲಿ ಪೋಲಿಯಂತೆ ಅಂಡಲೆಯುತ್ತಾನೆ. ಒಮ್ಮೊಮ್ಮೆ ಕಿತ್ತಳೆ ಹಣ್ಣು ಮಾರುವ ಹುಡಗರೊಂದಿಗೆ ರೈಲಿನಲ್ಲಿ ಮಂಗಳೂರು ತನಕ ಟಿಕೇಟಿಲ್ಲದೆ ಹೋಗಿ ಸಂಜೆಯಾದಾಗ ಮನೆ ಸೇರುತ್ತಾನೆ.

ಮಾರಪ್ಪ ಶೆಟ್ರ ಮಾವಿನ 'ಮರಕ್ಕೆ ಕಲ್ಲು ಬಿಸಾಡಿದ ಒಂದು ದೂರು. ನಾರಾಯಣ ಭಟ್ಟರ ಮಗಳು ಗಂಗಮ್ಮ ಸಾಲೆಗೆ ಹೋಗುವಾಗ ಹಲ್ಲು ಕಿರಿದನೆಂದು ಇನ್ನೊಂದು ದೂರು. ಪುತ್ತೂರಿಗೆ ಬಸ್ಸು ಹೋಗುವ ಮಾರ್ಗದಲ್ಲಿ

ಕಲ್ಲು ಇರಿಸಿದನೆಂದು ಮತ್ತೊಂದು. ನಲ್ಲೂರಾಯರು ಬಿತ್ತಿದ ಗದ್ದೆಗೆ ತೂತು ಕೊರೆದು ಮಮ್ಮದೆಯ ಗದ್ದೆಗೆ ಎಲ್ಲಾ ನೀರು ಬಿಟ್ಟನೆಂದು ಮಗದೊಂದು ದೂರು. ಎಂತಹ ಅಧಿಕ ಪ್ರಸಂಗಿ ಹುಡುಗನಪ್ಪಾ! ಚಿನ್ನದಂತಹ, ಆ ದಂಪತಿಗಳಿಗೆ ಈ ಕಿಲಾಡಿ ಕಿಟ್ಟ ಹೇಗೆ ಹುಟ್ಟಿಕೊಂಡನೆಂದು ಎಲ್ಲರೂ ಮರುಕಪಟ್ಟರು.

ಯಾವ ದೂರು ಬಂದರೂ 'ನನ್ನನ್ನು ನೋಡಿ ಹುಡುಗನನ್ನು ಕ್ಷಮಿಸಿ ಬಿಡಿರಿ' ಎಂದು ತಿಮ್ಮ ದೈನ್ಯತೆಯಿಂದ ಅಂಗಾಲಾಚಿ ಹೇಳಿದನೆಂದರೆ ಎಲ್ಲರೂ ಪಿಟ್ಟೆನ್ನದೆ ಸುಮ್ಮನಿರುತಿದ್ದರು.

ಸಾಹುಕಾರ್ ವೆಂಕಟ್ರಾಯ ಕಮ್ತಿಯವರು ಈ ಬಾರಿ ಮೂರು ಜೋಡಿ ಹಸುಗಳನ್ನು ಸುಬ್ರಹ್ಮಣ್ಯದಿಂದ ತಂದರು. ಅಂಗಡಿಯಲ್ಲಿ ಅಕ್ಕಿ, ಬೇಳೆ, ಕಡಲೆಕಾಯಿ, ಲಾಭಕ್ಕೆ ಮಾರಿದಂತೆ ವರ್ಷ ವರ್ಷ ಸುಬ್ರಹ್ಮಣ್ಯಕ್ಕೆ ಹೋಗಿ ಕುಳುಕುಂದ ಸಂತೆಯಿಂದ ಒಂದು ಹಿಂಡುವ ಹಸು ಕೊಂಡುಕೊಂಡು ಊರಿನಲ್ಲಿ ಲಾಭಕ್ಕೆ ಮಾರಿ ಹಣಸಂಪಾದಿಸು ಕಮ್ತಿಯವರ ಸಂಪ್ರದಾಯ ಬಹಳ ಹಿಂದಿನದು. ಈ ಬಾರಿ ಕಮ್ತಿಯವರು ತಂದ ಆ ಹಸು ಹಿಂಡನ್ನು ಕಂಡು ಎಲ್ಲರೂ ಪ್ರಶಂಸಿಸಿದರು. ವ್ಯಾಪಾರದಲ್ಲಿ ಎಂತಹ ಮಗನನ್ನೂ ಅವರು ಸೋಲಿಸಿಬಿಡುತ್ತಾರೆ. ಇಪ್ಪತ್ತೈದು ರೂಪಾಯಿಗೆ ಕೊಂಡುಕೊಂಡು ಇತರರೊಡನೆ ತಾನು ಕೊಂಡುಕೊಂಡ ಕ್ರಯ ಇನ್ನೂರ ಎಪ್ಪತ್ತೈದು ಎಂದು ಹೇಳುವುದು ಮಾತ್ರವಲ್ಲ—ಅವರನ್ನು ನಂಬಿಸಿಯೂ ಬಿಡುತ್ತಾರೆ.

ಕಮ್ತಿಯರಿಗೆ ಬಾರದ ಭಾಷೆಯಿಲ್ಲ. ಕನ್ನಡದಲ್ಲಿ ಕಮ್ತಿಯವರನ್ನು 'ಕವಿ' ಎಂದು ಕರೆದರೂ ಅಪವಾದವಾಗದು. 'ಸಂಯುಕ್ತ ಕರ್ನಾಟಕ'ದ ಏಜನ್ಸಿ ಅವರಿಗೆ. ದಿನನಿತ್ಯ ನೂರು ಪ್ರತಿ ಪತ್ರಿಕೆಗಳು ಬಂದರೆ ಒಂದೇ ಒಂದು ತಾಸಿನಲ್ಲಿ ಮಾರಿಬಿಡುವ ಚಾಲಾಕು ಅವರದು. ಹಾಗೆ ಪತ್ರಿಕೆ ಮಾರಾಟ ಮಾಡುವುದು ಕಮಿಶನ್ ಪಡೆಯುವುದಕ್ಕಲ್ಲವಂತೆ. "ಇಂತಹ 'ಕಮಿಶನ್' ಎಷ್ಟು ಹೋಗುತ್ತದೋ ಎಷ್ಟು ಬರುತ್ತದೋ! ನಮ್ಮ ಊರು ಸ್ವಲ್ಪ ಸುಧಾರಿಸಲಿ. ಹಳ್ಳಿಗರಲ್ಲಿ ಅಕ್ಷರಜ್ಞಾನವಾಗಲಿ. ಪತ್ರಿಕೆ ತರಿಸಿ ಓದುವ ಅಭ್ಯಾಸ ಬಳಗಲಿ...... ಅಷ್ಟಕ್ಕೆ ಮಾತ್ರ ನಾನು ತರಿಸುವುದು ಅಷ್ಟೆ" ಎಂದು ಅವರೇ ಹಲವು ಬಾರಿ ಸ್ಪಷ್ಟೀಕರಣೆ ಮಾಡುವುದುಂಟು. ಕರ್ಣಾಟಕದ ಏಕೀಕರಣವಾಗಬೇಕೆನ್ನುವವರಲ್ಲಿ ಕಮ್ತಿಯವರೂ ಒಬ್ಬ ಅಗ್ರಗಣ್ಯರು.

ಕಾಸರಗೋಡನ್ನು ಎಷ್ಟು ಮಾತ್ರಕ್ಕೂ ಕೇರಳಕ್ಕೆ ಬಿಟ್ಟುಬಿಡಲಾರೆವು ಎಂದು ಎಷ್ಟೋ ಬಾರಿ ಅವರು ವೇದಿಕೆ ಹತ್ತಿ ಹೇಳಿದುದುಂಟು. ಅವರು ಸರ್ಕಲ್ ಕಾಂಗ್ರೆಸ್ ಕಮಿಟಿಯ ಅಧ್ಯಕ್ಷರು. ಊರ ದೇಗುಲದ 'ಮೊಕ್ತೇಶ್ವರ'ರು. ಊರ ಸಹಕಾರ ಸಂಘದ ಚೇರ್‌ಮೇನರು. ಇನ್ನೇನೋ ಮೊನ್ನೆ ಇನ್ನೊಂದು ಹೊಸ ಸಂಘವನ್ನು ಮಾಡಿದ್ದಾರೆ. ಊರ ವ್ಯಾಪಾರಸ್ಥರ ವಾಣಿಜ್ಯ ಸಂಘ. ಇದರ ಕಛೇರಿ ಕಮ್ತಿಯವರ ಮನೆಯಲ್ಲಿ. ಪ್ರಮುಖ ವ್ಯಾಪಾರಸ್ಥರೆಲ್ಲಾ ಒಟ್ಟುಗೂಡಿ ಊರಿನಲ್ಲಿ ನಡೆಯುವ ಕಳ್ಳಸಂತೆಯನ್ನು ತಡೆಗಟ್ಟಿ, ಆ ದುಶ್ಚಾಳಿಯನ್ನು ನಿರ್ಮೂಲ ಮಾಡುವುದಲ್ಲದೆ, ಅಧಿಕಾರದಲ್ಲಿರುವ ಸರಕಾರಕ್ಕೆ ತಮ್ಮಿಂದ ಸಾಧ್ಯವಾಗುವ ಎಲ್ಲಾ ಬೆಂಬಲ ನೀಡುವ ಸಂಘ ಕಮ್ತಿಯವರ ನೇತೃತ್ವದಲ್ಲಿ ಸ್ಥಾಪನೆಯಾಯಿತು.

ಎಲ್ಲಾ ವಿಚಾರಗಳಿಗಿಂತಲೂ ಕಮ್ತಿಯವರ ಹಸುಹಿಂಡಿನ ವಿಚಾರ ಮಹತ್ವದ್ದು. ಅಂಗಡಿಯ ಮಮ್ಮದೆ ಒಂದು ಹಸುವಿಗೆ ಕ್ರಯಮಾಡಲು ಬಂದ. ಮಮ್ಮದೆ ಸ್ವಲ್ಪ ಅಧಿಕಪ್ರಸಂಗಿ ಜನ ಎಂದು ನಮಗೆ ಮೊದಲೇ ಗೊತ್ತು.

"ಆ ಹಸುವಿಗೆ ಸುಬ್ರಹ್ಮಣ್ಯದಲ್ಲಿ ನೀವು ಕೊಟ್ಟದ್ದು ಬರೇ ಐವತ್ತು ರೂಪಾಯಿಯಂತೆ ಕಮ್ತಿಯವರೇ ......"

ಅಷ್ಟೇ ಮಮ್ಮದೆ ಹೇಳಿದ ಮಾತು. ಕಮ್ತಿ ಮಮ್ಮದೆಯನ್ನು ನಡುವೆ ತಡೆದು ಆತನ ಮಾತು ನಿಲ್ಲಿಸಿಯೇ ಬಿಟ್ಟರು.

"ನನಗೆ ಅದು ಧರ್ಮಕ್ಕೆ ಸಿಕ್ಕಿದುದೆಂದು ಸುದ್ದಿಯಾಗಲಿ ಬ್ಯಾರಿಗಳೇ. ಆದರೆ ನೀವು ಮುನ್ನೂರು ರೂಪಾಯಿ ಕೊಟ್ಟರೂ ನಾನು ಮಾರುವಂತಿಲ್ಲ. ನಿಮ್ಮ ಜಾತಿ ಸ್ವಭಾವವೇ ಅದು. ಇಲ್ಲವಾದರೆ ಅಖಂಡ ಭಾರತವು ಎರಡು ಭಾಗಗಳಾಗಿ ವಿಭಜಿಸಲ್ಪಡಲಿತ್ತೇ? ಕೋಮುವಾರು ವಿಷಜ್ವಾಲೆ ಜನತೆಯನ್ನು ಸುಡುತ್ತಲಿತ್ತೇ? ನೌಕಾಲೀ—ತಿಪ್ಪೇರಾ ಜಿಲ್ಲೆಗಳಲ್ಲಿ ರಕ್ತದ ಕಾರಂಜಿ ಹರಿಯಲಿತ್ತೇ?" ಎಂದು ಬಹುದೊಡ್ಡ ವ್ಯಾಖ್ಯಾನವನ್ನೇ ಮಾಡಿಬಿಟ್ಟರು.

ಬಣ್ಣದ ಬಟ್ಟೆಯುಟ್ಟಿದ್ದ ಅಂಗಡಿಯ ಮಮ್ಮದೆ, ಕಮ್ತಿಯಲ್ಲಿ ಮುನಿದು ಅಂಗಳಕ್ಕಿಳಿದು ಹೊರಟೇ ಬಿಟ್ಟ.

ಸಾಲೆ ಬಿಟ್ಟು, ಬಯಲಲ್ಲಿ ಬರುತಿದ್ದ ಕಮ್ತಿಯವರ ಮಗ ದಾಮೋದರ ಎಂದಿನಂತೆ ಸಲುಗೆಯಿಂದ ಮಮ್ಮದೆಯನ್ನು ನಿಲ್ಲಿಸಿ "ಏನಯ್ಯಾ ಮಮ್ಮದೆ

ಬ್ಯಾರಿಗಳೇ......ಸುಬ್ರಹ್ಮಣ್ಯದಿಂದ ಈ ಬಾರಿ ತಂದ ಹಸುಗಳನ್ನು ನೋಡುವುದಿಲ್ಲವೇ?" ಎಂದಾಗ ಮಮ್ಮದೆಯು ಸಿಟ್ಟು ನೆತ್ತಿಗೇರಿತು.

"ನಿಮ್ಮ ಹಸುಗಳನ್ನು ಹುಲಿ ಹಿಡಿಯಲಿ........" ಎನ್ನುತ್ತಾ ಮಮ್ಮದೆ ಒಂದೇ ಸವನೆ ನಡೆದುಬಿಟ್ಟ.

ಸ್ವಾಭಾವಿಕವಾಗಿ ಶಾಂತಸ್ವಭಾವದ ಮಮ್ಮದೆ ಹೀಗೇಕೆ ನುಡಿದನೆಂದು ದಾಮೋದರನಿಗೆ ಆಶ್ಚರ್ಯವಾಯಿತು. ತಂದೆಯನ್ನು ವಿಚಾರಿಸಿದಾಗ ಪರಿಸ್ಥಿತಿಯಂತೂ ವಿಪರೀತವಾಯಿತು. "ಈ ಮೀನುಮಾರುವ ಮಮ್ಮದೆಗೆ ಇಷ್ಟು ಗರ್ವ ಬಂದಿತೆ?" ಎಂದು ಮುಂಡಿಗೆ ಮುರಿದುಕೊಂಡು ಒಂದೇ ಸವನೆ ಕಮ್ತಿ ಪೇಟೆಗೆ ನಡೆದರು.

ಮಮ್ಮದೆ ಸರಕಾರದ ಅಧಿಕಾರಪತ್ರವಿಲ್ಲದೆ ಅಂಗಡಿಯಲ್ಲಿ ಅಡಿಕೆ ಮಾರುತ್ತಿದ್ದುದು ಕಮ್ತಿಯರಿಗೆ ತಿಳಿಯದೆ ಇದ್ದೀತೆ? ನೆಟ್ಟಗೆ ಪೇಟೆಯಿಂದ ಕಸ್ಟಮ್ ಸಬ್‌ಇನೆಸ್ಪೆಕ್ಟರರನ್ನು ಕರೆದುಕೊಂಡು ಮನೆ ಶೋಧನೆ ಮಾಡಿಸಿದರು. ಅಂಗಡಿಯಲ್ಲಿ ಅಡಿಕೆಯೂ ದೊರೆಯಿತು. ಕೇಸುಮಾಡಬಾರದೆಂದು ಮಮ್ಮದೆ ಅಂಗಾಲಾಚಿ ಕೇಳಿಕೊಂಡರೂ ಇನೆಸ್ಪೆಕ್ಟರರು ಬಿಡುವವರಲ್ಲ. ಮಮ್ಮದೆ ಕೋರ್ಟು ಹತ್ತಲೇಬೇಕಾಯಿತು. ಮೂರು ತಿಂಗಳ ವಿಚಾರಣೆ ನಡೆದು ಮಮ್ಮದೆಗೆ ಮುನ್ನೂರು ರೂಪಾಯಿಗಳ ದಂಡ ವಿಧಿಸಲಾಯಿತು.

ಕಮ್ತಿಯವರ ಹಸುವಿನ ಹಿಂಡು ಸರಕಾರದ ಗುಡ್ಡದಲ್ಲಿ ಬೆಳೆದ ಹಸುರು ಹುಲ್ಲು ಮೇಯುತಿತ್ತು. ಅಂಗಡಿಯ ಮಮ್ಮದೆ ಹಿಂದಿನ ಹಟ ಸಾಧಿಸದೆ ಬಿಡುವ ಮಗನೆ? ತಿಮ್ಮನ ಮಗ ನಿಂಗ ಮಮ್ಮದೆಯ ಅಂಗಡಿಗೆ ಆಗಾಗ ಬರುವುದುಂಟು. ಬಂದಾಗಲೆಲ್ಲಾ ನಿಂಗನಿಗೆ ಒಂದು ಮುಷ್ಟಿ ಅವಲಕ್ಕಿ ಧರ್ಮಾರ್ಥವಾಗಿ ಮಮ್ಮದೆ ಕೊಡುವುದುಂಟು. ಬಾಳೆ ಗೊನೆಯಲ್ಲಿ ಹಣ್ಣು ಸ್ವಲ್ಪ ಕೆಟ್ಟಿದ್ದರೆ ಅದು ನಿಂಗನ ಪಾಲಿನದೇ! ಅವಲಕ್ಕಿ-ಬಾಳೆಹಣ್ಣು ತಿಂದು ಒಂದು ಬೀಡಿ ಸೇದಿದನೆಂದರೆ ನಿಂಗ ಮತ್ತೆ ನಾಲ್ಕು ತಾಸು ಬೇಕಿದ್ದರೂ ಅಂಗಡಿಯಲ್ಲೇ ಉಳಿದುಕೊಳ್ಳುತ್ತಾನೆ.

ಮಮ್ಮದೆ ಈ ದಿನ ನಿಂಗನನ್ನು ಪ್ರೀತಿಯಿಂದ ಕರೆದು ಒಂದು ಪಾವು ಅವಲಕ್ಕಿ ಸುರಿದ. ಬಾಳೆಗೊನೆಯಿಂದ ಹತ್ತಾರು ಹಣ್ಣು ಕಿತ್ತು ನಿಂಗನಿಗಿತ್ತ.

ಕೋರ್ಟಿನಲ್ಲಿ ಮುನ್ನೂರು ರೂಪಾಯಿ ದಂಡ ತೆತ್ತ ಅನಂತರ ಮಮ್ಮದೆ ಕಮ್ತಿಯ ಮೇಲಿನ ಸೇಡು ತೀರಿಸುವುದು ಹೇಗೆಂದು ಪ್ರತೀ

ದಿನವೂ ಆಲೋಚಿಸುತಿದ್ದ. ನಿಂಗನನ್ನು ಸತ್ಕರಿಸಿ, ತನ್ನ ಸಂಗತಿಯನ್ನೆಲ್ಲಾ ಆತನಿಗೆ ಹೇಳಿಕೊಂಡನು. ಇಬ್ಬರೂ ದೀರ್ಘಕಾಲ ಯೋಚಿಸಿದ ಅನಂತರ ಕವ್ಪಿತ್ತಯ ಹಸುವಿನ ಹಿಂಡನ್ನು ಗ್ರಾಮಾಧಿಕಾರಿಗಳ ಸರಕಾರಿ ದೊಡ್ಡಿಗೆ ನಿಂಗನು ಕಟ್ಟುವುದೆಂದು ನಿರ್ಧಾರವಾಯಿತು. ನಿಂಗನಿಗೆ ಸಹಾಯಕ್ಕಾಗಿ ಮಮ್ಮದೆ ತನ್ನ ಅಣ್ಣನ ಮಗ ಅಂದುವನ್ನು ಕಳುಹಿಸಿದ.

ನಿಂಗನೂ ಅಂದುವೂ ಮಮ್ಮದೆ ಕೊಟ್ಟ ಹಗ್ಗದಿಂದ ಸರಕಾರಿ ಭೂಮಿಯಲ್ಲಿ ಮೇಯುತಿದ್ದ ಕವ್ಪಿತ್ತಯವರ ಹಸುಹಿಂಡನ್ನು ಹಿಡಿದೇ ಬಿಟ್ಟರು. ಭಾರೀ ಬಿಂಕದಿಂದ ಪ್ರತಿಯೊಂದು ಹಸುವಿಗೂ ನಾಲ್ಕು ನಾಲ್ಕು ಪೆಟ್ಟು ಹೊಡೆದು ಗ್ರಾಮಾಧಿಕಾರಿಗಳ ಜಾನುವಾರು ದೊಡ್ಡಿಗೆ ಅಟ್ಟುತಿದ್ದುದನ್ನು ಮಮ್ಮದೆ ಅಂಗಡಿಯ ಮುಂದಿನ ಮಾವಿನ ಮರ ಹತ್ತಿ ನೋಡಿ ಮುಗುಳು ನಕ್ಕನು. ಕವ್ಪಿತ್ತಯ ಸೇಡು ತೀರಿಸಿಕೊಂಡೆನೆಂದು ಹೆಮ್ಮೆ ಪಟ್ಟುಕೊಂಡನು. ಎತ್ತುಗಳನ್ನು ದೊಡ್ಡಿಯಲ್ಲಿ ಕಟ್ಟಿ ಮರಳಿದ ನಿಂಗನಿಗೂ ಅಂದುವಿಗೂ ಹೊಟ್ಟೆಯಲ್ಲಿ ಹಿಡಿಯಲಾರದಷ್ಟು ಅವಲಕ್ಕಿ ಬಾಳೆಹಣ್ಣುಗಳು ದೊರೆತವು.

ಹಸು ಬಾರದಿದ್ದುದನ್ನು ನೋಡಿ ಕವ್ಪಿತ್ತಯವರು ಕಳವಳಗೊಂಡರು. ಅವರಲ್ಲಿ ಇವರಲ್ಲಿ ವಿಚಾರಿಸಿ ನಿಂಗನು ಮಾಡಿದ ಕೆಲಸ ತಿಳಿದುಕೊಂಡರು. ಪೆಟ್ಟಿಗೆಯಿಂದ ಹಣ ತೆಗೆದು, ದೊಡ್ಡಿಯಲ್ಲಿ ಹಣ ತೆತ್ತು ಹಸು ಹಿಂಡನ್ನು ಬಿಡಿಸಿಕೊಂಡು ಬಂದರು. ಒಂದು ಹಸುವಿಗೆ ಹನ್ನೆರಡಾಣೆಯಂತೆ ದಂಡ ತೆರಬೇಕಾಯಿತು ಕವ್ಪಿತ್ತಯವರು.

ಮಗ ದಾಮೋದರನನ್ನು ಕರೆದು ಕವ್ಪಿತ್ತ ತಿಮ್ಮನಿಗೆ ಕರೆಕಳುಹಿದರು.

"ನನ್ನನ್ನು ನೋಡಿ ಬಿಟ್ಟುಬಿಡಿ"ರೆಂಬ ತಿಮ್ಮನ ನಿವೇದನೆ ಕವ್ಪಿತ್ತಯವರ ಮುಂದೆ ಫಲಕಾರಿಯಾಗಲಿಲ್ಲ. ಬದಲಾಗಿ, ಕಳೆದ ಮಳೆಗಾಲದಲ್ಲಿ ತಿಮ್ಮನಿಗೆ ಕೊಟ್ಟ ಸಾಲದ ಐವತ್ತು ರೂಪಾಯಿಗೆ, ನೂರು ರೂಪಾಯಿಯೆಂದು ಬರೆದ ಪ್ರೊಮಿಸರಿ ನೋಟು ಹೊರಬಂದಿತು.

"ನೋಡು ತಿಮ್ಮಾ. . . . ನಾಳೆ ಹನ್ನೆರಡು ಗಂಟೆಯ ಮುನ್ನ ನೂರು ರೂಪಾಯಿಗಳನ್ನು ತಂದು ರಶೀದಿ ಪಡೆದು . . . ."

"ಸ್ವಾಮೀ . . . . ಅಷ್ಟು ಕೋಪಗೊಳ್ಳಬಾರದು. ಬಡವನ ಮೇಲೆ ಕರುಣೆ ತೋರಬೇಕು. ಏನಾದರೂ ಮಾಡಿ ಮುಂದಿನ ಸುಗ್ಗಿಯಲ್ಲಿ ಮುಗಿಸಿಬಿಡುತ್ತೇನೆ."

"ಅಷ್ಟೇ ಅಲ್ಲ ತಿಮ್ಮಾ. ನಿನ್ನ ಮಗನಿಂದಾಗಿ ನನಗಾದ ನಷ್ಟ ನಾಲ್ಕು ರೂಪಾಯಿ ಹನ್ನೆರಡಾಣೆ. ಅದರಿಂದಾಗಿ ನನಗಾದ ಅಪಮಾನಕ್ಕಾಗಿ ನಿನಗೈ ದಂಡ ಇಪ್ಪತ್ತೈದು ರೂಪಾಯ್ಯ—ಹೀಗೆ ಒಟ್ಟು ಇಪ್ಪತ್ತೊಂಭತ್ತು ರೂಪಾ ಹನ್ನೆರಡಾಣೆ ಮತ್ತು ಹಿಂದಿನ ಬಾಕಿ ನೂರು—ಎಲ್ಲಾ ನಾಳೆ ಹನ್ನೆರಡು ಗಂಟೆಯ ಮುನ್ನ ಎಣಿಸದಿದ್ದರೆ ನೀನು ಊರಿನಿಂದ ಹೋಗಬೇಕಾದೀತು. ಕೋರ್ಟು ಹತ್ತಿ ಜೈಲಿನ ಅನ್ನ ಉಣ್ಣುವ ಆಸೆಯಿದೆಯೆ? ಮಮ್ಮದೆಯ ಪಾಡೇನಾಯಿತು ನೋಡಿಕೊ." ಎಂದು ಕವ್ವಿತ್ತು ಬೆದರಿಸಿದರು.

ಮುಂದೆ ಏನೋ ತಿಮ್ಮ ಮಾತಾಡಲು ಪ್ರಯತ್ನಿಸುತಿದ್ದಾಗಲೇ ಸಿಟ್ಟು ನೆತ್ತಿಗೇರಿದ್ದ ಕವ್ವಿತ್ತುಯವರು ತಿಮ್ಮನ ಕೊರಳು ಹಿಡಿದು ಹೊರಗೆ ದೂಡಿ ಬಿಟ್ಟರು.

---

## 8

ಬಡವನಾದರೂ ತಿಮ್ಮ ಇಂತಹ ಅಪಮಾನಕ್ಕೆ ಎಂದಿಗೂ ಈಡಾಗಿರಲಿಲ್ಲ. ಅವನ ಬಾಳಿನಲ್ಲಿ ಈ ತನಕ ಯಾರೂ ಅವನನ್ನು ಕತ್ತುಹಿಡಿದು ಹೊರದೂಡಿ ದವರಿಲ್ಲ. ಹತ್ತು ಜನರ ಮಧ್ಯೆ ಮರ್ಯಾದೆಯಿಂದ ಬದುಕಿದರೆ ಸಾಕೆಂದೇ ಆತ ಬಗೆದುದು. ಆದರೆ ವಿಧಿ ಆತನನ್ನು ವಂಚಿಸಿತು.

ನಾಳೆ ಹನ್ನೆರಡು ಗಂಟೆಯ ಮುನ್ನ ಕವ್ವಿತ್ತುಗೆ ನೂರ ಇಪ್ಪತ್ತೊಂಭತ್ತು ರೂಪಾಯ್ಯ ಹನ್ನೆರಡಾಣೆ ಸುರಿಯಬೇಕು. ಎಂತಹ ಪ್ರಮಾದ! ತಿಮ್ಮನ ಬಾಳಿನ ಈ ಗೋಳಿನಲ್ಲಿ ಆತನನ್ನು ಯಾರು ಪಾರುಮಾಡುವವರು? ಪ್ರೀತಿಯ ಹೆಂಡತಿ ಕೊನೆಯುಸಿರೆಳೆದಳು. ಇನ್ನಿರುವ ಆತ್ಮೀಯರೆಂದರೆ ಬಾಲ್ಯದ ಗೆಳೆಯ ಶ್ಯಾನು ಭಾಗರು. ಎಂತಹ ಪರಿಸ್ಥಿತಿಯಲ್ಲಿಯೂ ತನ್ನ ಕೈ ಅವರು ಬಿಡಲಾರರೆಂದು ತಿಮ್ಮನಿಗೆ ಖಂಡಿತ ಗೊತ್ತು. ಆದರೆ ತಿಮ್ಮನ ಸ್ವಾಭಿಮಾನ ಬಹುದೊಡ್ಡದು.

ತಿಮ್ಮ ಹೇಗಾದರೂ ಜೀವನ ಹೋರಾಟದಲ್ಲಿ ಹೆಣಗಾಡಿ, ಕಷ್ಟಗಳಿಗೆ ಹೆಗಲೊಡ್ಡಿ, ಬಾಳುವೆನೆಂದು ಬಗೆದರೆ ಈ ಹಟಮಾರಿ ಹುಡುಗ ನಿಂಗ ಏನಾ ದರೂ ಮಾಡಿ ಇಂತಹ ಗಂಡಾಂತರಗಳಿಗೆ ಆತನನ್ನು ಬಲಿಕೊಡುತ್ತಾನೆ. ಹಾವು ಕಡಿತದಿಂದ, ವಿಷ ಹರಡಿ, ಮೈ ಕಪ್ಪಾಗಿದ್ದು ಕಳೇಬರ ಸನ್ನಿಹಿತವಾ ಗಿದ್ದ ತನ್ನ ಮಡದಿ ಒಂದುವರೆ ದಿನ ಮನೆಯಲ್ಲಿ ನರಳಿ ನರಳಿ ಸತ್ತಿದ್ದಳು. ಸಾಯುವಾಗ ತಿಮ್ಮನನ್ನು ಬಳಿ ಕರೆದು "ನಿಂಗನನ್ನು ಜಾಗ್ರತೆಯಿಂದ ಕಾಪಾಡಿ

ಕೊಳ್ಳಿ"ರೆಂದು ಗುಣುಗುಟ್ಟೆಯೇ ಆಕೆ ಪ್ರಾಣಬಿಟ್ಟಿದ್ದಳು. ಆ ಸನ್ನಿವೇಶವನ್ನು ಕೆಲವು ಬಾರಿ ನೆನಪಿಗೆ ತಂದುಕೊಂಡರೆ ತಿಮ್ಮನಿಗೆ ನಿಂಗನ ಎಂತಹ ದೊಡ್ಡ ತಪ್ಪುಗಳೂ ಮರೆತು ಹೋಗುತ್ತಿವೆ.

ಆದರೆ ಈ ಬಾರಿ ನಿಂಗ ಮಾಡಿದ ತಪ್ಪು ಬಹಳ ಘನತರವಾದದ್ದು. ತಪ್ಪಿಗೆ ತಕ್ಕ ಪ್ರಾಯಶ್ಚಿತ್ತ ಆಗಲೇ ಬೇಕು. ಕವಿತ್ತಿಗೂ ಮಮ್ಮದೆಗೂ ಹಗೆ ತನವಿದ್ದರೆ ಮಮ್ಮದೆಯ ಪಕ್ಷ ಹಿಡಿದು ಕವಿತ್ತಿಗೆ ಕೇಡುಮಾಡಲು ಮಮ್ಮದೆ ಯೇನು ನಿಂಗನ ದೊಡ್ಡಪ್ಪನೇ? ತಿಮ್ಮನ ಬಾಳಿನಲ್ಲಿ ನಿಂಗನೊಂದು ದೊಡ್ಡ ವಿಷದ ಬೀಜ. ತಿಮ್ಮನ ಸಿಟ್ಟು ಇದ್ದಕ್ಕಿದ್ದಂತೆಯೇ ನೆತ್ತಿಗೇರಿತು. ನಿನ್ನೆಯಿಂದ ನಿಂಗ ಮನೆಗೇ ಬಂದಿರಲಿಲ್ಲ. ಗದ್ದೆ ಉಳುವಾಗ ಕೋಣಗಳಿಗೆ ಹೊಡೆಯುವ ಬೆತ್ತವನ್ನು ಹಿಡಿದುಕೊಂಡು ತಿಮ್ಮ ಮಮ್ಮದೆಯ ಅಂಗಡಿಯತ್ತ ನಡೆದ.

ಅಂಗಡಿಯಲ್ಲಿ ಅವಲಕ್ಕಿ ತಿನ್ನುತ್ತಾ, ತಾನು ಹಿಂದಿನ ದಿನ ಮಾಡಿದ ಸಾಹಸದ ಕುರಿತು ಇನ್ನೂ ಇನ್ನೂ ಮಾತನಾಡುತ್ತಾ ಸಮಯ ಕಳೆಯು ತ್ತಿದ್ದನು ನಿಂಗ. ನಿಂಗನ ತಟ್ಟೆಯ ಅವಲಕ್ಕಿ ಮುಗಿಯುವುದರೊಳಗಾಗಿ ಮಮ್ಮದೆ ಇನ್ನೊಂದು ಪಾವು ಅವಲಕ್ಕಿ ತಂದು ತಟ್ಟೆಯ ಮೇಲೆ ಸುರಿದ. ನಿಂಗ ತನಗೆ ಮಾಡಿದ ಸಹಾಯ ಆತ ಎಂದಿಗೂ ಮರೆಯಲುಂಟೆ? ಆದರೆ ಈ ಹೆಚ್ಚಿನ ಅವಲಕ್ಕಿ ತಿನ್ನಲು ನಿಂಗನ ಹೊಟ್ಟೆಯಲ್ಲಿ ಸ್ಥಳವಿರಲಿಲ್ಲ. ಇದ್ದರೂ ಅದನ್ನು ತಿನ್ನುವ ಭಾಗ್ಯವಾದರೂ ನಿಂಗನಿಗಿರಲಿಲ್ಲ. ಒಂದು ತುತ್ತು ಬಾಯಿಗೆ ತುರುಕಿಸಿ ಇನ್ನೊಂದು ತುತ್ತಿಗಾಗಿ ನಿಂಗನ ಕೈ ಅವಲಕ್ಕಿ ತಟ್ಟೆಯ ಮೇಲಿತ್ತು. ಅಷ್ಟರಲ್ಲೆ ನಿಂಗ ಬೆಚ್ಚಿ ಬಿದ್ದ. ಏನೋ ಪರ್ವತವೇ ಆತನ ಮೇಲೆ ಕುಸಿದು ಬಿದ್ದಂತಾಯಿತು. ಆತ ಕುಳಿತಲ್ಲಿಂದ ಏಳುವದರೊಳಗೆ ತಿಮ್ಮನ ಕೈಯ ಬೆತ್ತ ಇನ್ನೂ ಹತ್ತು ಪೆಟ್ಟು ಹೊಡೆದಿತ್ತು. ನಿಂಗ ಓಡಲು ಪ್ರಯತ್ನಿಸಿದರೆ ಅದೂ ಸಾಧ್ಯವಾಗಲಿಲ್ಲ. ಕಬ್ಬಿಣದಂತಿದ್ದ ಕೈಯಿಂದ ತಿಮ್ಮ ನಿಂಗನ ಬೆನ್ನು ಪುಡಿ ಯಾಗುವ ತನಕವೂ ಹೊಡೆದ. ನಿಂಗ ಬೊಬ್ಬಿಟ್ಟು ಕೂಗಿದ. ತಿಮ್ಮನಿಗೆ ಕನಿಕರ ಹುಟ್ಟಲಿಲ್ಲ. ಬೆತ್ತವೆಲ್ಲಾ ತುಂಡುತುಂಡಾಗಿ ಚೂರಾಗಿತ್ತು. ಗದ್ದೆ ಉಳುವಾಗ ಮೂರು ತಿಂಗಳಿಂದ ಆ ಜೋಡೆತ್ತುಗಳಿಗೆ ಅಷ್ಟು ಹೊಡೆದೂ ಅಳುಕದೆ ಇದ್ದ ಬೆತ್ತವಿಂದು ನಿಂಗನ ಬೆನ್ನಲ್ಲಿ ತನ್ನ ಸಮಾಧಿಯನ್ನು ಕಂಡಿತು. ತಿಮ್ಮ ಮಗನನ್ನು ತಪ್ಪಿಸಿಕೊಳ್ಳಲು ಇನ್ನೂ ಬಿಡಲಿಲ್ಲ. ಕೈಯಿಂದ, ಕಾಲಿಂದ ಹೊಡೆಯಲಾರಂಭಿಸಿದ. ಹೊಡೆತಕ್ಕೆ ಕೊನೆಯಿಲ್ಲವೇ? ತಿಮ್ಮನೇನು ನಿಂಗ

ನನ್ನು ಇಂದು ಕೊಲ್ಲುವುದೇ? ಹಾವು ಕಡಿತದಿಂದ ಪ್ರಿಯ ಪತ್ನಿ ಸಾಯುವಾಗ ಹೇಳಿದುದೇನು? ಎಲ್ಲವೂ ತಿಮ್ಮನಿಗೆ ಮರೆತೇ ಹೋಗಿತ್ತು.

"ಎಷ್ಟಾದರೂ ನಿನ್ನ ಮಗನಲ್ಲವೇ ತಿಮ್ಮಪ್ಪಾ? ಆ ಸಾಧು ಹುಡುಗನನ್ನು ಬಿಟ್ಟುಬಿಡು" ಎಂದು ಅಂಗಡಿಯ ಮಮ್ಮದೆ ಅಂಗಾಲಾಚಿ ಬೇಡಿ ತಿಮ್ಮನ ಕೈಯ ಹಿಡಿತವನ್ನು ಬಿಡಿಸಲು ಧಾವಿಸಿದ.

ಬಡವನ ಸಿಟ್ಟಲ್ಲವೇ? ತಿಮ್ಮ ಕಿಡಿಕಾರಿದ. ಇಷ್ಟರತನಕ ಊರಿನಲ್ಲಿ ಯಾರೊಡನೆಯೂ ಜಗಳವಾಡದ ಆ ಸಾಧು ರೈತ ಇಂದು ಕೋಪದಿಂದ ಕಿಡಿಕಿಡಿಯಾಗಿದ್ದಾನೆ. ತಿಮ್ಮನ ಕೈಯ ಹಿಡಿತ ಸಡಿಲಿತು. ನಿಂಗನೀಗ ತಾನು ಬದುಕಿಕೊಂಡೆನೆಂದು ಓಡಿದ. ಎಲ್ಲಿಯ ವರೆಗೆ ಆತ ಓಡಿದನೋ ಅಲ್ಲಿಯ ವರೆಗೆ ಆತನ ಮೈಮೇಲಿನ ಗಾಯಗಳಿಂದ ಕೆಳಗೆ ಬಿದ್ದ ರಕ್ತದ ಬಿಂದುಗಳನ್ನು ಗುರುತಿಸಬಹುದಿತ್ತು.

ತಿಮ್ಮನ ಬಳಿ ಈಗ ನಿಂತಿರುವುದು ಆತನ ಮಗ ನಿಂಗನಲ್ಲ. ನಿಂಗನಿಗೆ ಅವಲಕ್ಕಿ ತಿನ್ನಿಸಿ ಆತನನ್ನು ಮೈಗಳ್ಳನಾಗಿ ಮಾಡಿದ ಮಮ್ಮದೆ! ನಿಂಗನ ಮೂಲಕವಾಗಿ ಕಮ್ತಿಯ ಮೇಲಿನ ಹಗೆ ತೀರಿಸಿಕೊಂಡ ಮಮ್ಮದೆ! ತಿಮ್ಮ ಕೆಂಪೇರಿದ. ಮಮ್ಮದೆಯ ಕತ್ತುಹಿಡಿದು ಎರಡೇಟನ್ನಿತ್ತ. ಮಮ್ಮದೆ ಪುನಃ ತಿಮ್ಮನಿಗೆ ಹೊಡೆಯುವುದರೊಳಗಾಗಿ ಅಂಗಡಿಯಲ್ಲಿ ನೆರೆದಿದ್ದವರು ಜಗಳ ನಿಲ್ಲಿಸಿದರು. ತಿಮ್ಮನನ್ನು ಆತನ ಮನೆಗೆ ತಿರುಗಿಸಿದರು.

ಕಮ್ತಿಯ ಹಸುವಿನ ಹಿಂಡು ಸರಕಾರಿಗುಡ್ಡದಲ್ಲಿ ಹುಲ್ಲು ಮೇಯುತಿತ್ತು. ಹಿಂಡಿನ ಹಿಂದೆ ಮರೆಯಾಗಿ ಅವಿತು ಮಮ್ಮದೆಯ ಅಂಗಡಿಯಲ್ಲಿ ನಡೆದ ಸನ್ನಿವೇಶಗಳನ್ನು ಕಮ್ತಿ ಕಂಡು ಹಲ್ಲು ಕಿರಿದುಕೊಂಡ. ಆತನಿಗೆ ತಿಮ್ಮನ ಮೇಲೆ ಕರುಣೆ ಹುಟ್ಟದೆ ಇರಲಿಲ್ಲ. ಹೇಗಾದರೂ ಮಮ್ಮದೆಯ ಗರ್ವ ಮುರಿಯಿತಲ್ಲಾ ಎಂದು ಕಮ್ತಿ ಸಂತಸಪಟ್ಟರು.

ಕಮ್ತಿಯ ಮೇಲಿನ ಹಗೆತನವನ್ನು ಮಮ್ಮದೆ ನಿಂಗನ ಮೂಲಕ ತೀರಿಸಿಕೊಂಡ. ಮಮ್ಮದೆಯ ಮೇಲಿನ ಸೇಡನ್ನು ಕಮ್ತಿ ತಿಮ್ಮನ ಮೂಲಕ ತೀರಿಸಿಕೊಂಡರು. ಇವರ ಈ ಕಾದಾಟದಲ್ಲಿ ಬಡ ಕುಟುಂಬವೊಂದು ಮಣ್ಣು ಪಾಲಾಯಿತು!

---

## 9

ರಾತ್ರೆ ಮಮ್ಮದೆ ತನ್ನ ಅಂಗಡಿಯಲ್ಲೇ ಮಲಗಿಕೊಂಡನು. ಏಕೋ ಅವನ ಮನಸ್ಸಿನಲ್ಲಿ ನೆಮ್ಮದಿಯಿರಲಿಲ್ಲ. ರಾತ್ರೆಯಂತೂ ಅವನಿಗೆ ನಿದ್ದೆಯೇ ಬರಲಿಲ್ಲ. ತಿಮ್ಮ ತನ್ನ ಕುತ್ತಿಗೆ ಹಿಡಿದು ಕೊಟ್ಟ ಏಟಿನ ನೆನಪು ಆತಗೆ ಬಾರಿ ಬಾರಿಗೂ ಬಾರದೆ ಇರಲಿಲ್ಲ. ಹಲವು ಬಾರಿ ಅಂಗಡಿಗೆ ಜೀನಸಿಗೆ ಬರುತಿದ್ದಾಗ ಸಂತೋಷದಿಂದ ನಗು ಬೀರುತ್ತಾ, ಅತೀ ಸಲುಗೆಯಿಂದ ವರ್ತಿಸುತಿದ್ದ ತಿಮ್ಮ ನಿಗೆ ಇದೇಕೆ ಈ ಉಗ್ರರೂಪವೆಂದು ತಿಳಿಯದಾದ. ಇವೆಲ್ಲಾ ಕೆಲಸಗಳೂ ಕಮ್ತಿಯ ಕಪಟನಾಟಕದಿಂದಲ್ಲದೆ ತಿಮ್ಮನ ಸ್ವಂತ ಬುದ್ಧಿಯಿಂದಲ್ಲವೆಂದು ಮಮ್ಮದೆಗೆ ತಿಳಿಯದೆ ಇರಲಿಲ್ಲ. ತಾನು ಬದುಕಿ ಉಳಿದರೆ ಮುಂದೊಂದು ದಿನ ಕಮ್ತಿಗೆ ಇದನ್ನು ಸಲ್ಲಿಸದೆ ಬಿಡೆನೆಂದು ಬಾರಿಬಾರಿಗೂ ಮಮ್ಮದೆ ಮಂಡಿಗೆ ಕಡಿದುಕೊಳ್ಳುತಿದ್ದ. ಒಮ್ಮೆಲೇ ಮಮ್ಮದೆಗೆ ಏನೋ ನೆನಪು ಹುಟ್ಟಿಕೊಂಡಿತು. ಅದು ಆ ಹುಡುಗ ನಿಂಗನ ನೆನಪು.

ತನ್ನಿಂದಾಗಿ ನಿಂಗನಿಗೆಷ್ಟು ಬಾವು ನೋವುಗಳು? ಹಗಲಿನ ಸನ್ನಿವೇಶದ ಅನಂತರ ನಿಂಗನ ಸುಳಿವೇ ಇಲ್ಲ. ಅವನೆಲ್ಲಿಯಾದರೂ ಮನೆಗೆ ಹೋದರೆ ತಿಮ್ಮನ ಕೈಯಲ್ಲಿ ಬದುಕಿ ಉಳಿಯುವುದಿಲ್ಲವೆಂದು ಮಮ್ಮದೆ ನಂಬಿದ್ದ. ನಿಂಗ ನನ್ನು ದೇವರೇ ಕಾಪಾಡಬೇಕೆಂದು ಮಮ್ಮದೆ ಮನವಾರೆ ಪ್ರಾರ್ಥಿಸಿಕೊಂಡ.

ಯಾರೋ ಹೊರಗಿನಿಂದ ಮಮ್ಮದೆಯ ಹೆಸರೆತ್ತಿ ಕೂಗಿದಂತಾಯಿತು. ಮಮ್ಮದೆ ತಟ್ಟನೆ ಎದ್ದು ಕರೆಗೆ ಓಗೊಟ್ಟನು. ಎಲ್ಲಿಯಾದರೂ ಭ್ರಾಂತ ನಾದ ತಿಮ್ಮನೇ ಬಂದಿರಬಹುದೋ ಅಥವಾ ಕಮ್ತಿಯ ಪ್ರೇರೇಪಣೆಯಿಂದ ಇತರರಾರೂ ಬಂದಿರಬಹುದೇ ಎಂಬ ಅಂಜಿಕೆಯಾಯಿತು ಮಮ್ಮದೆಗೆ.

ಕರೆದ ದನಿ ತೀರಾ ಪರಿಚಿತವಾದುದು.

ನಿಂಗನ ಸ್ವರದಲ್ಲಿ ಎಷ್ಟು ಬದಲಾವಣೆಯಾಗಿ ಹೋಗಿತ್ತು! ಆತನ ಬೆನ್ನ ಗಾಯಗಳು ಇನ್ನೂ ಒಡೆದು ಕಾಣುತಿದ್ದುವು. ಮಮ್ಮದೆ ನಿಂಗನನ್ನು ನೋಡಿ ಮಕ್ಕಳಂತೆ ಅಳಲಾರಂಭಿಸಿದನು.

"ಮಗೂ...... ನನ್ನಿಂದಾಗಿ ಇಂತಹ ಕಷ್ಟಗಳು ನಿನಗೆ ಲಭಿಸಿದುವು ......" ಮಮ್ಮದೆ ಮುಂದೆ ಮಾತಾಡಲಾರದಾದ.

ಹನ್ನೆರಡು ಹರೆಯದ ಆ ಹುಡುಗನಲ್ಲಿ ಈಗ ವಿವೇಕ ಹುಟ್ಟಿತ್ತು. ತನ್ನ ತಪ್ಪುಗಳನ್ನೆಲ್ಲಾ ತಿಳಿಯುವ ಜ್ಞಾನೋದಯವಾಗಿತ್ತು.

"ಮಮ್ಮದೆ ಬ್ಯಾರಿಯವರೇ—ನಾನು ಈ ಊರಿಗೆ ಮಾರಿಯಾಗಿದ್ದೇನೆ. ಚಿಕ್ಕಂದಿನಲ್ಲೇ ಅಮ್ಮನನ್ನು ಕಳೆದುಕೊಂಡ ನಿರ್ಭಾಗ್ಯನು ನಾನು. ಅಪ್ಪನ ಹೆಸರನ್ನೂ ಹಾಳುಮಾಡಿದೆ. ಕೋಪೋದ್ರೇಕದಿಂದ ಮತ್ತನಾಗಿ ಆತ ನಿಮ್ಮನ್ನು ಹೊಡೆದುಬಿಟ್ಟನೆಂದು ನೀವು ಕೋಪಗೊಳ್ಳಬಾರದು. ನನ್ನನ್ನು ನೋಡಿ ಆತನನ್ನು ಕ್ಷಮಿಸಿರಿ. ಇವೆಲ್ಲವೂ ಕಮ್ತಿಯ ಕಪಟನಾಟಕ. ಬದುಕಿ ಉಳಿದರೆ ಆತನಿಗೆ ಬುದ್ಧಿಕಲಿಸುವ ದಿನ ದೂರವಿರಲಾರದು ....."

ಮಮ್ಮದೆಗೆ ನಿಂಗನ ನೋವಿಗಾಗಿ ತುಂಬಾ ಅನುತಾಪವಿದ್ದರೂ ಆತನ ಮಾತುಗಳಿಂದ ಅಪಾರವಾದ ಆನಂದವಾಯಿತು. ನಿಂಗನ ನಿಜವಾದ ಗುಣ ಸ್ವಭಾವವನ್ನು ಮಮ್ಮದೆ ಅರಿತುಕೊಂಡ. ನಿಂಗ ಮಾತು ಮುಂದರಿಸಿದ.

"ನಾನಿನ್ನು ಊರಲ್ಲಿ ಉಳಿಯಬಾರದು. ಬ್ಯಾರಿಗಳೇ—ಬೊಂಬ್ಯಾಗೆ ಹೋಗುತ್ತೇನೆ. ದುಡಿದು ಹಣ ಸಂಪಾದಿಸುವೆನು. ತಂದೆಯ ಸಾಲ ಸಲ್ಲಿಸುತ್ತೇನೆ. ಆದರೆ ನಾನು ಎಲ್ಲಿಗೆ, ಯಾಕೆ ಹೋಗುವೆನೆಂದು ಯಾರಲ್ಲಿಯೂ ಹೇಳಲಾರೆ. ನೀವೂ ಯಾರಲ್ಲಿಯೂ ಹೇಳಬಾರದು. ಗುಟ್ಟಿನಲ್ಲಿಡಿರಿ. ನೀವೂ ಹೋಗಬಾರದೆಂದು ನನ್ನನ್ನು ಬಲವಂತಪಡಿಸಬಾರದು. ನಾನು ಹೋಗಿಯೇ ತೀರಬೇಕು ...... ಹೋಗಲೇಬೇಕು." ನಿಂಗನ ಕಣ್ಣಿಂದ ಕಂಬನಿ ಕೋಡಿಕೋಡಿಯಾಗಿ ಹರಿಯಿತು.

ಮಮ್ಮದೆ ತನ್ನ ಹಣದ ಪೆಟ್ಟಿಗೆಯ ಬೀಗ ತೆಗೆದ. ಮಮ್ಮದೆ ಬಾಯಲ್ಲಿ ಅಧಿಕಪ್ರಸಂಗಿಯಾದರೂ ಮೃದುವಾದ ಹೃದಯವುಳ್ಳವನು. ಬೊಂಬ್ಯಾತನಕ ಹೋಗುವ ಖರ್ಚಿಗಾಗಿ ನಿಂಗನ ಕೈಯಲ್ಲಿ ಇಪ್ಪತ್ತೈದು ರೂಪಾಯಿ ತುರುಕಿಸಿದ. ನಿಂಗ ದುಡಿದು ತನ್ನ ಹಣ ಶೀಘ್ರವಾಗಿ ಕಳುಹಿಸುವೆನೆಂದು ಮಮ್ಮದೆಗೆ ಭರವಸೆಯಿದೆ. ತನ್ನ ದೊಡ್ಡ ಮಗ ಮಿಲಿಟರಿಯಲ್ಲಿದ್ದವನು ರಜೆಯಲ್ಲಿ ಊರಿಗೆ ಬಂದು ಮರಳುವಾಗ ಬಿಟ್ಟುಹೋದ ಒಂದೆರಡು ಅಂಗಿ ಇಜಾರುಗಳನ್ನು ತೆಗೆದು ನಿಂಗನಿಗೆ ಕೊಟ್ಟ. ಮುಂಜಾನೆ ಕೋಳಿ ಕೂಗುವ ಮುನ್ನ ನಿಂಗ ಅಂಗಡಿ ಬಿಟ್ಟು ಹೊರಟಿದ್ದ.

---

## 10

ಮನೆಯಲ್ಲಿ ಮಲಗಿದ್ದ ತಿಮ್ಮನಿಗೂ ನಿದ್ದೆ ಹತ್ತಲಿಲ್ಲ. ಹುಡುಗನಿಗೇಕೆ ಹಾಗೆ ಹೊಡೆದೆನೆಂದು ಆತನಿಗೆ ತುಂಬಾ ಪಶ್ಚಾತ್ತಾಪವಾಗಿತ್ತು. ನಿದ್ದೆ ಹತ್ತಲೇ ಇಲ್ಲ. ಮಣ್ಣಿನ ಮೇಲೆಯೇ ತಿಮ್ಮ ಮಲಗಿಕೊಂಡಿದ್ದ.

ನಿನ್ನೆಯಿಂದಲೂ ಆತ ಒಲೆಯಲ್ಲಿ ಬೆಂಕಿ ಹಚ್ಚಲೇ ಇಲ್ಲ. ನುಸಿಯೊಂದು ಗಾನಮಾಡುತ್ತಾ ತಿಮ್ಮನ ಮೈಮೇಲೆ ಕುಳಿತು ಹಾರಿತು. ಎರಡು ದಿನಗಳಿಂದಲೂ ರಕ್ತ ದೊರೆಯದೆ ಬಡವಾಗಿದ್ದ ತಗಣೆಯೊಂದು ತಿಮ್ಮನ ಮೈಯನ್ನು ಕಚ್ಚಿತು. ಗುಡಿಸಲಿನ ಹೊರಗೆ ಮಲಗಿದ್ದ ಬಡಕಲು ನಾಯಿ ಬೊಗಳಿತು. ಕಳ್ಳರಿಗಾಗಿ ನಾಯಿ ಬೊಗಳಿದುದಲ್ಲ. ಒಂದು ಕೂಳಿಗೂ ಗತಿಯಿಲ್ಲದ ತಿಮ್ಮನ ಗುಡಿಸಲಿಗೆ ಕಳ್ಳರೇಕೆ ಬರಬೇಕು? ಹೊಟ್ಟೆಗೆ ಆಹಾರವಿಲ್ಲದೆ ಹಸಿವಿನಿಂದ ಅದು ಬೊಗಳಿತ್ತು.

ಬಿಹಿರ ತಟ್ಟಿಯ ಹೊರಗಿನಿಂದ ತಂಬೆಲರು ಒಳನುಗ್ಗಿ ತಿಮ್ಮನ ಮೇಲೆ ಬೀಸಿತು. ತಿಮ್ಮ ನಿದ್ದೆ ಬರಬಹುದೆಂದು ಕಣ್ಣು ಮುಚ್ಚಿಕೊಂಡನು.

ಯಾರೋ ಹೆಣ್ಣು ಬಳಿ ಬಂದು ತಿಮ್ಮನನ್ನು ಕರೆದೆಬ್ಬಿಸುತಿದ್ದಳು. ತಿಮ್ಮ ಗಾಬರಿಯಿಂದ ಕೇಳುತ್ತಾನೆ.

"ಯಾರಮ್ಮಾ ನೀನು?"

"ಗುರುತು ಸಿಗಲಿಲ್ಲವೇ? ಆ ನಾಗರ ಹಾವು ನನ್ನನ್ನು ನಿಮಗೆ ಗುರುತು ಸಿಗದಷ್ಟು ದೂರಮಾಡಿತು!"

"ಅಯ್ಯೋ....... ನನ್ನ ಭಾಗ್ಯದ ನಿಧಿಯೇ..... ಕಡೆಗಾದರೂ ಬಂದೆಯಾ? ಬಾರ...... ನಿನ್ನ ಒಡನಾಟದಲ್ಲಿ ಎಂತಹ ನೋವನ್ನು ನಾನು ಮರೆತಿದ್ದೆ. ನಿನ್ನ ಸಹವಾಸದಲ್ಲಿ ಕಷ್ಟ ಕಾರ್ಪಣ್ಯಗಳ ಮಧ್ಯೆಯೂ ಎಂತಹ ಸವಿಗನಸುಗಳನ್ನು ಕಂಡಿದ್ದೆ! ನೀನು ಸಾಕಿದ ಬೆಕ್ಕು ಮರಿ ಇಟ್ಟಿತು. ಆ ಮರಿಯನ್ನು ಶ್ಯಾನುಭಾಗರ ಹೆಂಡತಿ ತನಗೆ ಬೇಕೆಂದು ಕೊಂಡೊಯ್ದರು. ನೀನು ಬಹಳ ಗುಣವಂತೆಯೆಂದು ಶ್ಯಾನುಭಾಗರ ಹೆಂಡತಿ ಬಾರಿಬಾರಿಗೂ ನಿನ್ನ ಗುಣಗಾನ ಮಾಡುತಿದ್ದಾರೆ. ನಿನ್ನ ಮೇಲೆ ಅವರಿಗೆಷ್ಟು ಆದರ ಗೊತ್ತೆ? ಆ ದಿನ ಪೇಟೆಯಿಂದ ಶ್ಯಾನುಭಾಗರು ತಂದ ಜತೆ ಸೀರೆಗಳಲ್ಲಿ ಒಂದನ್ನು ನಿನಗೆ ಪುಕ್ಕಟೆಯಾಗಿ ಕಳುಹಿಸಿದ್ದು ನಿನಗೆ ನೆನಪಿದೆಯೇ? ಎಂತಹ ಚಿಟ್ಟೆ ಬಣ್ಣದ ಹಳದಿ ಸೀರೆಯಮ್ಮಾ ಅದು? ನೀನೇಕೆ ಅದನ್ನು ಇಂದು ಉಟ್ಟು ಬರಲಿಲ್ಲ?

ಶ್ಯಾನುಭಾಗರ ಹೆಂಡತಿ ನಿನ್ನನ್ನು ಈಗ ನೋಡಿದರೆಂದರೆ ಎಷ್ಟು ಸಂತೋಷ ಪಡುವರೋ ಏನೋ? ನಮ್ಮ ಬಾಳಿನ ಬವಣೆಗಳಲ್ಲಿ ಯಾರಾದರೂ ಸಹಭಾಗಿಗಳಾಗಿದ್ದರೆ ಅದು ಶ್ಯಾನುಭಾಗರೂ ಅವರ ಪತ್ನಿ ನಾಗವೇಣಿಯೂ ಇಬ್ಬರೇ ಎಂದು ನೀನೇ ಹೇಳಿದ್ದಿಯಲ್ಲವೇ? ಮತ್ತೆ ನೋಡು—ನೀನು ಬೆಳೆಸಿದ ಆ ಬದನೆ ಗಿಡ ಕಾಯಿಬಿಟ್ಟಿತ್ತು. ಅದರ ಮೊದಲ ಮೂರು ಕಾಯಿಗಳನ್ನು ಶ್ಯಾನುಭಾಗರಿಗೇ ಕೊಟ್ಟಿದ್ದೆ. ಅವರಿಗೆ ಬಹಳ ಸಂತೋಷವಾಯಿತಮ್ಮ. ನಿನ್ನ ಅಕ್ಕನ ಮಗಳಿಗೆ ಮದುವೆಯಂತೆ. ಅದಕ್ಕೆ ಆಹ್ವಾನ ಬಂದಿತು. ನನ್ನ ತಂಗಿ ಮದುವೆಗೆ ಇಲ್ಲದಂತೆ ವಿಧಿ ಮಾಡಿತು, ಎಂದು ಇಲ್ಲಿಗೆ ಬಂದ ನಿನ್ನ ಅಕ್ಕ ಅತ್ತರು. ಈಗ ನೀನು ಬಂದುದನ್ನು ನೋಡಿದರೆ ಅವರಿಗೆಷ್ಟು ಆಶ್ಚರ್ಯವಾಗಲಿಕ್ಕಿಲ್ಲ?"

ಏಕೋ ನಿರಾತಂಕವಾಗಿ ಸಾಗುತ್ತಲಿದ್ದ ತಿಮ್ಮನ ಮಾತು ಒಮ್ಮೆಲೇ ನಿಂತುಹೋಯಿತು.

"ಸಾಕುಮಾಡಿ ನಿಮ್ಮ ಕಪಟ ವ್ಯಾಖ್ಯಾನ. ನಿಮ್ಮೊಡನೆ ಇನ್ನೆಂದಿಗೂ ಇರಲು ಬಂದವಳಲ್ಲ ನಾನು. ನೋಡಿ—ಈ ತಬ್ಬಲಿ ಹುಡುಗನಿಗೆ ಹೀಗೇಕೆ ಹೊಡೆದಿರಿ? ನಾನು ಅಂದು ನಿಮ್ಮಲ್ಲಿ ಹೇಳಿದುದೇನು? ನೀವೀಗ ಮಾಡಿದುದೇನು?"

ತಾನು ಕೈಹಿಡಿದು ಬಳಿ ನಿಂತಿದ್ದ ಹುಡುಗ ಬಿಕ್ಕಿ ಬಿಕ್ಕಿ ಅಳುತಿದ್ದಾನೆ. ಗಾಯದಿಂದ ನೆತ್ತರು ಈಗಲೂ ಹೊರಸೂಸುತ್ತಲೇ ಇದೆ. ಮೈಮೇಲೆ ಹದಿನಾರು ಕಡೆ ಚರ್ಮ ಹರಿದು ಹೋಗಿದೆ. ಆಕೆ ಮಗುವನ್ನು ಎತ್ತಿಕೊಂಡಳು. ಕಣ್ಣ ಹನಿಯನ್ನು ಸೆರಗಿನಿಂದ ಉಜ್ಜಿ ಮಗುವಿನ ಮುಖವನ್ನು ಮುದ್ದಿಟ್ಟಳು.

"ಸಾಕು ಮಗನೇ—ಹೊರಡು. ಈ ಪಾಪಿ ರಕ್ಕಸನ ಸಹವಾಸ ಇಂದಿಗೇ ಮುಗಿಯಲಿ. ಹೋಗೋಣ" ಎಂದು ಆ ಹೆಣ್ಣು, ಮಗನನ್ನೆತ್ತಿಕೊಂಡು ಅಂಗಳಕ್ಕಿಳಿದು ಹೊರಟುಹೋದಳು.

ತಿಮ್ಮ ಗಾಬರಿಯಿಂದ ದಿಗ್ಭ್ರಾಂತನಾಗಿ ಎಚ್ಚತ್ತನು. ಕಣ್ಣು ಬಿಟ್ಟು ಸುತ್ತಲೂ ನೋಡಿದರೆ ಅಲ್ಲಿ ಯಾರೂ ಇರಲಿಲ್ಲ. ಬಡ ತಗಣೆಯೊಂದು ಆತನ ಬೆನ್ನಿಗೆ ಅಂಟಿಕೊಂಡು ರಕ್ತ ಹೀರುತ್ತಲೇ ಇತ್ತು. ಅಟ್ಟದಲ್ಲಿ ಬಿಲದಿಂದ ಇಲಿಯೊಂದನ್ನು ಹೊರಗೆಳೆದು ತಿನ್ನುತ್ತಿದ್ದ ಬೆಕ್ಕು 'ಮಿಯಾಂ' ಎನ್ನುತಿತ್ತು. ಬಡಕಲು ನಾಯಿ ಹಸಿವೆಯಿಂದ ಕೂಗುತ್ತಲೇ ಇತ್ತು.

ಆಚೀಚೆ ಮುಗ್ಗರಿಸಿ ತಿಮ್ಮ ಪುನಃ ಮಲಗಿಕೊಂಡನು. ಇನ್ನೊಮ್ಮೆ ತಂಬೆಲರು ಮೈ ಸೋಂಕಿದಾಗ ಕಣ್ಣ ರೆಪ್ಪೆ ಮುಚ್ಚಿಕೊಂಡಿತು. ಸ್ವಲ್ಪವೂ ನಿದ್ದೆ ಬರುವಂತಿಲ್ಲ. ಪ್ರಯತ್ನವೆಲ್ಲವೂ ನಿಷ್ಫಲವಾದುವು. ಮಧ್ಯರಾತ್ರೆ ಇನ್ನೂ ಕಳೆದಿರಲಿಲ್ಲ. ತಿಮ್ಮನ ಮನಸ್ಸಿಗೆ ಶಾಂತಿಯೇ ದೊರಕಲಿಲ್ಲ. ಆತ ಊರ ಮುಸ್ಲಿಮರ ಮಸೀದಿಯ ಕಡೆಗೆ ನೋಡಿದ. ಇನ್ನೂರು ಮಂದಿ ಮಹ್ಮದಿಯ ತರುಣರು ಡೊಣ್ಣೆ ಹಿಡಿದುಕೊಂಡು ಬರುತಿದ್ದವರು ತಿಮ್ಮನ ಮನೆಮುಂದೆ ನಿಂತರು.

"ನೀನು ನಿನ್ನೆ ಮುಸ್ಲಿಂ ಜಾತಿಯವನೊಬ್ಬನನ್ನು ಕುತ್ತಿಗೆ ಹಿಡಿದು ಹೊಡೆದು ನಮ್ಮ ಜಾತಿಗೇ ಅಪಮಾನ ಪಡಿಸಿದುದಕ್ಕಾಗಿ ನಿನಗೆ ಪ್ರಾಯಶ್ಚಿತ್ತವನ್ನು ಮಾಡುವುದಕ್ಕಾಗಿ ನಾವು ಬಂದಿರುತ್ತೇವೆ."

ತಿಮ್ಮನು ಎದೆಗುಂದಲಿಲ್ಲ. ಅಂಗಳಕ್ಕಿಳಿದು ತಾನು ಮಾಡಿದ ತಪ್ಪನ್ನು ಒಪ್ಪಿಕೊಂಡನು. ಆದರೆ ಕ್ಷಮೆ ಕೇಳಲಿಲ್ಲ. ತನ್ನನ್ನು ಕೊಲ್ಲಿರೆಂದು ಎದೆಯೊಡ್ಡಿದನು. ಹಗ್ಗದಿಂದ ತಿಮ್ಮನನ್ನು ಕೈಕಾಲು ಕಟ್ಟಿಕೊಂಡು ಹೋಗುವಷ್ಟರಲ್ಲಿ ತನ್ನ ಬಾಲ್ಯದ ಗೆಳೆಯ ಬೀಡಿನ ಶ್ಯಾನುಭಾಗರು ಅನೇಕ ಸಂಗಡಿಗರೊಡಗೂಡಿ ತಿಮ್ಮನನ್ನು ಬಿಡಿಸಲಿಕ್ಕಾಗಿ ಬಂದಿದ್ದರು. ಮುಸ್ಲಿಮರ ತಂಡ ಗಾಬರಿಯಿಂದ ಓಡಿಹೋಗಿತ್ತು. ತಿಮ್ಮನನ್ನು ಕಟ್ಟಿದ ಹಗ್ಗವನ್ನು ಶ್ಯಾನುಭಾಗರು ಬಿಡಿಸುತಿದ್ದರು.

ತಿಮ್ಮ ತನ್ನ ಗೆಳೆಯ ಶ್ಯಾನುಭಾಗರ ಉಪಕಾರ ಸ್ಮರಣೆಮಾಡುವೆನೆಂದು ಅಡಿಯಿಟ್ಟನು. ಶ್ಯಾನುಭಾಗರನ್ನು ಅಪ್ಪಿ ಹಿಡಿದುಕೊಳ್ಳುವೆನೆಂದು ಕೈಚಾಚಿದನು. ಅಲ್ಲಿ ಶ್ಯಾನುಭಾಗರಾಗಲೀ ಅವರ ಪರಿವಾರದವರಾಗಲೀ ಯಾರೂ ಇದ್ದಿರಲಿಲ್ಲ. ಇದೇನು ಭ್ರಮೆಯೆಂದು ತಿಮ್ಮ ಅರಿಯದಾದ!

ಎಂತಹ ಕೆಟ್ಟ ಕನಸುಗಳಿವು? ಎಂದು ತಿಮ್ಮ ವ್ಯಸನದಿಂದ ಅಂಗಳದ ಬಳಿ ಮಾಡಿದ್ದ ಮಣ್ಣಿನ ಕಟ್ಟೆಯ ಮೇಲೆ ಹೋಗಿ ಕುಳಿತುಕೊಂಡ.

ಕೋಳಿ ಕೂಗಿತು. ಬೆಳಗಾಗಲು ಇನ್ನು ಕೆಲವು ತಾಸುಗಳು ಮಾತ್ರ ಉಳಿದಿರಬಹುದು. ನಾಳೆ ಹನ್ನೆರಡು ಗಂಟೆಯ ಮುನ್ನ ಕವ್ತಿಯ ಹಣ ಸಲ್ಲಿಸದಿದ್ದರೆ ಪರಿಣಾಮವಿಲ್ಲ. ಪ್ರಾಣಹೋದರೂ ಇನ್ನು ಆತನಲ್ಲಿ ಅವಧಿ ಮುಂದರಿಸಬೇಕೆಂದು ಅಂಗಾಲಾಚುವ ಮಗ ತಿಮ್ಮನಲ್ಲ. ಆದರೆ ಕವ್ತಿಯ ಸಾಲ ಸಲ್ಲಿಸುವ ಬಗೆ ಹೇಗೆ? ತಿಮ್ಮನು ದೀರ್ಘವಾದ ನಿಟ್ಟುಸಿರಿಟ್ಟ. ತಾನು

ನಿಂಗನಿಗೆ ಹೊಡೆದ ಅನಂತರ ಹುಡುಗ ಮನೆಗೆ ಬಂದೇ ಇಲ್ಲ. ಎಂತಹ ತುಂಟನಾದರೂ ಆತ ತನ್ನ ಜೀವಿತದ ಸರ್ವಸ್ವವಲ್ಲವೆ? ಅವನು ಮನೆಗೇ ಬಾರದೆ ಹೋದರೆ? ತನ್ನಲ್ಲಿ ಮುನಿದು ಬಾವಿಗೆ ಹಾರಿಬಿಟ್ಟರೆ? ನದಿಗೆ ಧುಮುಕಿದರೆ? ರೈಲಿನ ಪಟ್ಟಿಗೆ ತಲೆಯಿಟ್ಟರೆ? ತನ್ನ ಪಾಡೇನು? ತಿಮ್ಮನ ಬೇಗುದಿಗೆ ಕೊನೆಯಿಲ್ಲದಾಯಿತು. ನಿಂಗ ಬಂದರೆ ಆತನನ್ನು ಕೊಂಡಾಟ ದಿಂದ ಅಪ್ಪಿ ಹಿಡಿದು, ತಲೆಸವರಿ, ಮುಂದೆ ಹಾಗೆ ಮಾಡಬಾರದೆಂದು ಬುದ್ಧಿ ಹೇಳಿ ಆತನನ್ನು ಸರಿದಾರಿಗೆ ತರುವೆನೆಂದು ತಿಮ್ಮ ಕನಸುಕಂಡನು.

---

## 11

ನಿನ್ನೆ ದಿನ ಶ್ಯಾನುಭಾಗರು ಕಚೇರಿಯಿಂದ ಬರುವಾಗ ವೇಳೆಯಾಗಿತ್ತು. ನಾಗವೇಣಿ ಎಂಟು ತಿಂಗಳ ತನ್ನ ಹೆಣ್ಣು ಮಗುವನ್ನು ಹೆಗಲಿಗೆ ಹಾಕಿಕೊಂಡು ಗಂಡನ ಬರವನ್ನೇ ಇದಿರು ನೋಡುತಿದ್ದಳು. ಅಣ್ಣನ ಹೆಂಡತಿ ಕಮಲ, ಮಾಧವ ನನ್ನು ಉಣ್ಣಿಸಿ ಮಲಗಿಕೊಂಡಳು. ನಾಗಿಗೆ ಮದುವೆಯಾಗುವ ಆರು ವರ್ಷ ಗಳ ಮುಂಚಿತವಾಗಿಯೇ ತನಗೆ ವಿವಾಹವಾಗಿದ್ದರೂ ಇನ್ನೂ ಕೂಸೊಂದನ್ನೂ ಪಡೆಯುವ ಭಾಗ್ಯವನ್ನು ಭಗವಂತನು ಕರುಣಿಸಿಲ್ಲವೆಂದು ಆಕೆ ಹಲವು ಬಾರಿ ಕರುಳನ್ನು ಒತ್ತಿಕೊಳ್ಳುತಿದ್ದಳು. ರಾಮುನ ಹೆಂಡತಿ ನಾಗಿ ತನ್ನ ಮಗುವನ್ನು ಒಯ್ಯಾರದಿಂದ ಆಡಿಸುವಾಗ ಅದನ್ನಾಕೆಗೆ ನೋಡಲು ಕಷ್ಟವಾಗುತ್ತಿದೆ. ಆದರೆ ಅದರಲ್ಲಿ ನಾಗಿಯದೇನು ತಪ್ಪಿದೆ?

ಅತ್ತೆ ನೀಲಿಯಂತೂ ಇಡೀ ದಿನ ಮಗುವಿನೊಂದಿಗೇ ಸಮಯ ಕಳೆಯು ತ್ತಿದ್ದಾಳೆ. ತನ್ನ ಗಂಡ ಮಾಧವನಂತೂ ತಮ್ಮನ ಮಗುವನ್ನು ಅಕ್ಕರೆಯಿಂದ ಎತ್ತಿಕೊಂಡರೆ ಕಮಲಗೆ ಎಲ್ಲಿಲ್ಲದ ಸಿಟ್ಟು. ಕಮಲ ನಿರುತ್ಸಾಹಿಯಾಗಿ ಮಲಗಿ ಕೊಂಡಿದ್ದಾಳೆ. ಎಷ್ಟರ ತನಕ ಶ್ಯಾನುಭಾಗರೂ ನಾಗಿಯೂ ಈ ಮನೆ ಯಲ್ಲಿರುವರೋ ಅಷ್ಟರ ತನಕ ತನಗೆ ಸುಖ ದೊರೆಯಲಾರದೆಂದು ಆಕೆ ಖಂಡಿತವಾಗಿ ಬಗೆದಿದ್ದಳು. ಮಾಧವ ಗದ್ದೆಯಲ್ಲಿ ದುಡಿದ ಆಯಾಸವನ್ನು ನಿದ್ದೆಯಲ್ಲಿ ಮರೆತಿದ್ದನು. ನೀಲಿ ಮಾತ್ರ ತಾನು ಅರ್ಧ ಹೆಣೆದು ಇಟ್ಟ ಆ ಚಾಪೆಯ ಕೆಲಸವನ್ನು ಸಂಪೂರ್ಣ ಮಾಡಲಿಕ್ಕಾಗಿ ಕುಳಿತಿದ್ದಳು.

ನಾಯಿ ಬೊಗಳಿತು!

"ರಾಮು ಬಂದನೇ?" ನೀಲಿ ಒಳಗಿನಿಂದ ವಿಚಾರಿಸಿದಳು. ನಾಗಿ ಮಗುವನ್ನು ನೆಲದ ಮಣ್ಣ ಮೇಲೆ ಬಿಟ್ಟು, ಬಂದವರಾರೆಂದು ನೋಡಿದಳು.

ಅಂಗಡಿಯ ಮಮ್ಮದೆ ಮಂಜೇಶ್ವರದಿಂದ ಮರಳುವ ಸಂಭ್ರಮ. ಆತ ಹೀಗೆ ಕತ್ತಲೆ ಮಾಡಿಕೊಂಡೇ ಮನೆಗೆ ಹೋಗುವ ವಾಡಿಕೆ. ಎಲ್ಲಿ ಹೋಗುವಾಗಲೂ ಊರವರಿಗೆಲ್ಲಾ ಗೊತ್ತಾಗಲೆಂದೋ ಏನೋ ಯಾರೂ ಮಾತನಾಡಿಸದಿದ್ದರೂ, ಮನೆಯವರೆಲ್ಲಾ ನಿದ್ರಿಸಿದ್ದರೂ ಕರೆದು, ಕೂಗಿ, ಒಂದೆರಡು ಇಲ್ಲದ ಸಲ್ಲದ ಹರಟೆ ಹೊಡೆಯದೆ ಹೋಗುವವನಲ್ಲ ಮಮ್ಮದೆ. ಯಾರೂ ಸಿಗದಿದ್ದರೆ ಮಮ್ಮದೆಗೆ ಬಾಯಿ ಬಾರದ ಪ್ರಾಣಿಗಳಲ್ಲಾದರೂ ಮಾತನಾಡಲೇ ಬೇಕು. ಶ್ಯಾನುಭಾಗರ ಮನೆಮುಂದೆ ಬೊಳ್ಳು ನಾಯಿ ಮಮ್ಮದೆಯನ್ನು ಕಂಡು ಬೊಗಳಿತು.

"ಏ ಬೊಳ್ಳು-ಏನು ಬೊಗಳುತ್ತೀಯಾ? ಶ್ಯಾನುಭಾಗರೇನು ಇಷ್ಟು ಬೇಗ ನಿದ್ರಿಸಿಬಿಟ್ಟರೆ?" ಮಮ್ಮದೆ ನಾಯಿಯನ್ನು ಕುರಿತು ಮಾತನಾಡಿಸುತ್ತಾನೆ! ಅವನಿಗೆ ಉತ್ತರದ ಅಪೇಕ್ಷೆಯೇನೂ ಇಲ್ಲ. ಮತ್ತೆ ಯಾರಾದರೇನು ಆತಗೆ?

"ಯಾರದು ಮಮ್ಮದೆ ಬ್ಯಾರಿಯವರೇ? ಎಲ್ಲಿಂದ ಬರುತ್ತಿದ್ದೀರಿ? ನಮ್ಮ ಯಜಮಾನರು ಪೇಟೆಯಲ್ಲಿ ಸಿಕ್ಕಿದರೇ? ಇನ್ನೂ ಬಂದಿಲ್ಲವಲ್ಲಾ?" ನಾಗಿ ವಿಚಾರಿಸಿದಳು.

ಅಷ್ಟು ಮಾತನಾಡಿಸುವವರಿದ್ದರೆ ಸಾಕು ಮಮ್ಮದೆಗೆ. ನಾಗಿ ಕೇಳಿದುದೇನೋ? ಮಮ್ಮದೆ ಹೇಳಿದುದೇನೊ? ಅವನಲ್ಲಿ ಅಷ್ಟು ವಿಷಯ ಸಂಗ್ರಹವಿತ್ತು. ಎರಡು ಮೂರು ಮುಂದೆ ಬಂದು ಈಗ ಎರಡು ದಿನಗಳಲ್ಲಿ ಕಮ್ತಿಗೂ ತನಗೂ ನಡೆದ ಕಾದಾಟವನ್ನೂ, ಅದರಲ್ಲಿ ನಿಂಗನು ವಹಿಸಿದ ಪಾತ್ರವನ್ನೂ ತಿಮ್ಮನ ಪ್ರಕೃತದ ದುರವಸ್ಥೆಯನ್ನೂ ಹೇಳಿ ಮುಗಿಸಿದನು.

"ನೋಡಿ ನಾಗಿ ಅಮ್ಮ—ಆ ನಿಂಗ ಹುಡುಗ ಊರಿನಿಂದಲೇ ಓಡಿ ಹೋಗಿದ್ದಾನೆ. ಯಾರಿಗೂ ಗೊತ್ತಿಲ್ಲ. ಮತ್ತೆ ಕೋಣಗಳಿಗೆ ಹೊಡೆಯುುವ ಬೆತ್ತದಲ್ಲಿ ಹೊಡೆದರೆ ನಿಂಗ ಬಿಡಿ—ನಾನಾದರೆ ನಿಂತೇನೇ ಈ ಊರಲ್ಲಿ?"

"ನಿಂಗ ಹೋಗಿಬಿಟ್ಟನೇ?"

"ಹೌದು ನಿಂಗ ಹೋದ. ಎಲ್ಲಿಗೆ ಹೋದನೆಂದು ಯಾರಿಗೂ ಗೊತ್ತಿಲ್ಲ. ಎಲ್ಲಾ ಆ ಕಮ್ತಿಯ ಕೆಲಸ. ಅವನೊಬ್ಬ ಈ ಊರಿಗೇ ಬ್ರಹ್ಮರಾಕ್ಷಸ.

ನೋಡಿ ಅಮ್ಮ—ಆ ತಿಮ್ಮನ ವಿಷಯದಲ್ಲಿ ನನಗೆ ತುಂಬಾ ಕನಿಕರವಾಗು ತ್ತಿದೆ. ಅವನು ತನ್ನ ಪ್ರಾಣವನ್ನು ತೆಗೆದುಕೊಳ್ಳಲೂ ಬಹುದು. ಅಂತಹಾ ಮಹಾ ಪ್ರಮಾದದಲ್ಲಿ ಪಾಪ ಸಿಕ್ಕಿಹೋಗಿದ್ದಾನೆ. ಹೆಂಡತಿ ಹಾವು ಕಚ್ಚಿ ಸತ ವ್ಯಥೆಯೇ ಸಂಪೂರ್ಣ ಮಾಸಿಲ್ಲ. ಈಗ ಹುಡುಗನೂ ಊರಿಂದ ಹೋದ್ರ ನೆಂದರೆ ಅವನು ಹೇಗೆ ಸಹಿಸಬೇಕು? ಅಷ್ಟು ಮಾತ್ರವೇ? ಆ ಬ್ರಹ್ಮರಾಕ್ಷಸ ಕಮ್ತಿ ಅನ್ಯಾಯವಾಗಿ ಆತನಿಂದ ಒಂದು ನೂರು ರೂಪಾಯಿಗಳಿಗೆ ನೋಟು ಬರೆಸಿಕೊಂಡಿದ್ದಾನೆ. ನಾಳೆ ಹನ್ನೆರಡು ಗಂಟೆಯ ಮುನ್ನ ತಿಮ್ಮ ಹಣ ಸಲ್ಲಿಸಲೇಬೇಕೆಂದೂ, ತಪ್ಪಿದರೆ ತಾನು ಸ್ವೀಕರಿಸೆನೆಂದೂ ದೃಢವಾಗಿ ಕಮ್ತಿ ಹೇಳಿದ್ದಾನೆ. ತಿಮ್ಮ ಎಲ್ಲಿಂದ ಹಣ ಕೊಡುವುದು ನಾಗಿ ತಾಯೀ? ಆತ ಈ ಸಂಕಟದಿಂದ ಪಾರಾಗಲು ಪ್ರಾಣಹತ್ಯ ಮಾಡಿಕೊಳ್ಳಲು ಹೇಸುವ ಮಗನೂ ಅಲ್ಲ." ಎಂದು ಅವಸರ ಅವಸರವಾಗಿ ಹೇಳಿ ತನಗೆ ಹೊತ್ತಾಯಿ ತೆಂದು ಮಮ್ಮದೆ ಹೊರಟನು.

ನಾಗಿ ಅಂಗಳದಲ್ಲಿ ಮಮ್ಮದೆಯೊಡನೆ ಇಷ್ಟು ಮಾತಾಡುತ್ತಿರುವಾಗ ಮಗು ಗಟ್ಟಿಯಾಗಿ ಅಳಲಾರಂಭಿಸಿತು. ನೀಲಿ ಮಗುವನ್ನು ಎತ್ತಿಕೊಂಡಳು. ಮಗುವಿನ ಅಳು, ಮಮ್ಮದೆಯ ಮಾತಿನ ಠೇಂಕಾರ, ಆಗಂತುಕನನ್ನು ನೋಡಿ ಗಟ್ಟಿಯಾಗಿ ಬೊಗಳುವ ಬೊಳ್ಳ ನಾಯಿಯ ಗರ್ಜನೆ, ಒಳಗೆ ಮಲಗಿದ್ದ ಕಮಲನನ್ನು ಎಚ್ಚರಿಸದೆ ಇದ್ದೀತೆ? ಆಕೆ ಅಂಗಳದತ್ತ ನೋಡಿ ಕೊಂಡಳು. ಒಡನೆ ಗಂಡನನ್ನು ಎಚ್ಚರಿಸಿದಳು.

"ಏಳೀಂದ್ರೆ . . . . . ಎಂತಹ ಸುಟ್ಟ ನಿದ್ದೆ ನಿಮ್ಮದು?" ಎಂದು ರಾಗ ವೆತ್ತಿದಳು ಕಮಲೆ.

ಮಾಧವ ಎದ್ದು ಕುಳಿತ.

"ಏನು ರಾಮು ಇನ್ನೂ ಬರಲಿಲ್ಲವೇ ಕಮಲು?"

ರಾಮು ಇನ್ನೂ ಬಂದಿಲ್ಲ. ನೋಡಿ ನಿಮ್ಮ ಸೀತೆಯ ಕಾರುಬಾರು. ಈಕೆ ಹೆಂಗಸಲ್ಲವೇ? ಮಗುವನ್ನು ಮನೆಯಲ್ಲಿ ಅಳಬಿಟ್ಟು, ಅಂಗಳದಲ್ಲಿ ನೋಡಿ, ಅಂಗಡಿಯ ಮಮ್ಮದೆಯೊಡನೆ ಸಲ್ಲಾಪವಾಡುತ್ತಿದ್ದಾಳೆ. ಮತ್ತೆ ನಾನು ಸುಮ್ಮನೆಹೇಳಿದುದೇ? ಪೇಟೆಯ ಹುಡುಗಿಯರ ಅಭ್ಯಾಸವೇ ಅದು. ಇಲ್ಲದಿದ್ದರೆ ಆ ಮಾಪಿಳ್ಳೆ ದಾರಿಯಲ್ಲಿ ಹೋಗುತಿದ್ದವನನ್ನು ತಡೆದು ನಿಲ್ಲಿಸಿ ಇವಳಿಗೇನು ಮಾತನಾಡುವ ಅಗತ್ಯ? ಯಾರಾದರೂ ಏನಾದರೂ

ಹೇಳಬಹುದು ಎಂಬ ಭಯವಾದರೂ ಇವಳಿಗಿದೆಯೇ? ಹಡೆದ ತಾಯಲ್ಲವೇ ಈಕೆ? ಆ ಮಗುವನ್ನು ಮಣ್ಣ ಮೇಲೆ ಬಿಟ್ಟು ಮಮ್ಮದೆಯೊಡನೆ ಮಾತಾಡಲು ಹೋಗಲು ಆತನೇನು ಈಕೆಯ ಕುಟುಂಬಿಕನೇ? ನೀವಾದರೂ ಹೇಳಿ ನೋಡಿ. ನಮ್ಮ ಮನೆಯಗೌರವಕ್ಕೆ ಇದು ಕುಂದು. ಆಕೆಯ ಗಂಡನ ಹೆಸರಿಗೆ ಹಾಳು."

ಮಾಧವ ಎಲ್ಲವನ್ನೂ ಕೇಳಿ ತೂಕಡಿಸುತ್ತಾ ಚಾಪೆಯ ಮೇಲೆ ಕುಳಿತಿದ್ದ.

"ನಾನು ಏನು ಹೇಳಿದರೂ ನೀವು ಯಾವಾಗಲೂ ಹೀಗೆಯೇ ತೂಕಡಿಸುತ್ತಾ ಇದ್ರಿ. ನಾಳೆ ಅಪವಾದವೇನಾದರೂ ಬಂದರೆ ನಿಮ್ಮ ಹೆಗಲ ಮೇಲೆಯೂ ಅದು ಏರದೆ ಹೋದೀತೆ? ಆಕೆ ನಿಮ್ಮ ತಮ್ಮನ ಹೆಂಡತಿಯಲ್ಲವೇ? ನೀವು ರಾಮನ ಅಣ್ಣನಲ್ಲವೇ? ಮನೆಯ ಯಜಮಾನರಲ್ಲವೇ? ನಿಮಗೆ ಅಧಿಕಾರವಿಲ್ಲವೆ? ಆಕೆಯನ್ನೇ ಕೇಳಿರಿ. ಎಲೇ ನೀನು ಗಂಡೋ ಹೆಣ್ಣೋ ಎಂದು?"

ನಾಯಿ ಇನ್ನೊನ್ಮ್ಮೆ ಬೊಗಳಿತು. ಕಮಲು ಮತ್ತು ಮಾಧವ ಎಚ್ಚರದಿಂದಲೇ ಇದ್ದರು. ಆತುರದಿಂದ ನಾಗಿ ಮಗುವನ್ನೆತ್ತಿಕೊಂಡು ಅಂಗಳಕ್ಕಿಳಿದಳು. "ನೋಡ್ರೀ—ಆ ಮಮ್ಮದೆ ಪುನಃ ಬಂದನೆಂದು ಕಾಣುತ್ತದೆ." ಎಂದು ಕಮಲ ಗಂಡನಲ್ಲಿ ಗೊಣಗುಟ್ಟಿದಳು.

ನಾಗಿ ಮಗುವಿನಲ್ಲಿ ಹೇಳುತ್ತಾಳೆ "ನೋಡೇ ಸುಶೀಲಾ—ನಿನ್ನ ಅಪ್ಪ ಬರುತಿದ್ದಾರೆ.....ಓ....ಅದೋ....ಅಲ್ಲಿ......ನೋಡಿದೆಯಾ ಸುಶೀ...."

ಶ್ಯಾನುಭಾಗರು ಇಂದು ಬಹಳ ಆಯಾಸಪಟ್ಟಿದ್ದಾರೆ. ನಾಗಿ ಮಗುವನ್ನು ತಾಯ ಕೈಯಲ್ಲಿ ಕೊಟ್ಟು ಗಂಡನಿಗೆ ಕಾಲು ತೊಳೆಯಲು ನೀರು ಕೊಟ್ಟಳು. ಶ್ಯಾನುಭಾಗರು ಈ ದಿನ ಹೀಗೆ ಏನೂ ಮಾತನಾಡದೆ ಸುಮ್ಮನಿದ್ದುದನ್ನು ನೋಡಿ ನಾಗಿ ಕಳವಳಗೊಂಡಳು. ಸಮಯ ನೋಡಿ ಹೇಗಾದರೂ ಮಮ್ಮದೆ ಹೇಳಿದ ತಿಮ್ಮನ ಸಂಗತಿಯನ್ನು ಗಂಡನ ಕಿವಿಗೆ ಹಾಕಿಯೇ ಬಿಟ್ಟಳು. ಅದನ್ನು ಈಗಾಗಲೇ ಶ್ಯಾನುಭಾಗರೂ ತಿಳಿದಿದ್ದರು. ಈ ದಿನ ತಿಮ್ಮನ ಮನೆಗೆ ಹೋಗಲು ಹಲವಾರು ಕೆಲಸಗಳ ತೊಂದರೆಯಿಂದ ಶ್ಯಾನುಭಾಗರಿಗೆ ಸಂದರ್ಭ ದೊರೆಯಲೇ ಇಲ್ಲವೆಂದೇ ಅವರ ಕಳವಳಕ್ಕೆ ಕಾರಣ.

"ಈಗಲೇ ಹೋಗಿಬಿಡಲೇ ನಾಗಿ?"

"ಈಗ ಬೇಕೆಂದಿಲ್ಲ. ರಾತ್ರೆ ತುಂಬಾ ಆಯಿತಲ್ಲವೇ? ನಾಳೆ ಕೋಳಿ ಕೂಗುವ ಹೊತ್ತಿಗೇ ಹೋಗಿಬಿಡಿರಿ. ಹೇಗಾದರೂ ಆತನನ್ನು ಉಳಿಸಿರಿ. ನಿಮ್ಮ ಬಾಲ್ಯ ಸ್ನೇಹಿತನಲ್ಲವೆ?"

ಶ್ಯಾನುಭಾಗರು ಉಂಡು ಮಲಗಿಕೊಂಡರು. ರಾತ್ರೆ ನಿದ್ದೆ ಹತ್ತಲು ತುಂಬಾ ಕಷ್ಟವಾಯಿತು. ಅಂದು ಊರ ಜಾತ್ರೆಯಲ್ಲಿ ಗೌರವದ ಸ್ಥಾನಕ್ಕಾಗಿ ಮಂಜಪ್ಪನಿಗೂ ತನಗೂ ನಡೆದ ಜಗಳದ ಪ್ರತಿಯೊಂದು ದೃಶ್ಯವೂ ಕಣ್ಣ ಮುಂದೆ ನಲಿಯತೊಡಗಿದುವು. ಪ್ರತಿಯೊಂದು ದೃಶ್ಯದಲ್ಲಿಯೂ ತನ್ನ ಗೆಳೆಯರಲ್ಲಿ ಅತೀ ಬಲಿಷ್ಟನಾದ ತಿಮ್ಮನ ಮೂರ್ತಿ ಆತನನ್ನು ಎವೆಯಿಕ್ಕದೆ ನೋಡುತ್ತಲೇ ಇತ್ತು. ಎಂತಹ ವಿಪತ್ತಿನಲ್ಲಿಯೂ ತನ್ನ ಪ್ರಾಣ ಬಲಿದಾನ ನೀಯಲು ಮುಂದಾದ ತಿಮ್ಮನ ಈ ವಿಪತ್ತಿನಲ್ಲಿ ತಾನು ಸಹಕರಿಸಿ ಆತನ ಹಿಂದಿನ ಋಣವನ್ನು ತೀರಿಸುವ ಸಂದರ್ಭ ದೊರೆಯಲಿಲ್ಲವಲ್ಲಾ ಎಂದು ಶ್ಯಾನುಭಾಗರು ಪುನಃ ಕಂಬನಿಗರೆದರು. ಒಮ್ಮೆ ಗಾಬರಿಯಿಂದ ಎದ್ದು ಅಂಗಳಕ್ಕಿಳಿದು ಆಗಸವನ್ನು ನೋಡಿ ಇನ್ನೂ ತುಂಬಾ ರಾತ್ರೆಯಿದೆಯೆಂದು ತಿಳಿದು ಪುನಃ ಮಲಗಿಕೊಂಡರು. ಹೇಗಾದರೂ ಮುಂಜಾನೆಯ ಕೋಳಿ ಕೂಗುವ ಹೊತ್ತಿಗೇ ತಿಮ್ಮನ ಮನೆಗೆ ಹೊರಡಲನುವಾದರು.

ಹುಚ್ಚನಂತೆ ತಿಮ್ಮ ರಾತ್ರೆಯಿರುವಾಗಲೇ ಅಂಗಳದ ಜಗುಲಿಯ ಮೇಲೆ ಏನೋ ಆಲೋಚಿಸುತ್ತಾ ಕುಳಿತುಕೊಂಡಿದ್ದಾನೆ. ರಾತ್ರೆ ಏನೋ ಹಲವಾರು ಕೆಟ್ಟ ಕನಸುಗಳನ್ನು ಕಂಡು ಆತ ಭ್ರಾಂತನಾಗಿದ್ದನು. ಗಾಬರಿಯಿಂದ ಶ್ಯಾನುಭಾಗರು ತನ್ನಲ್ಲಿಗೆ ಬರುತಿದ್ದುದನ್ನು ಕಂಡು ಫಕ್ಕನೆ ಕುಳಿತಲ್ಲಿಂದ ಎದ್ದನು. ಅನಂತರ ಆತಗೆ ತನ್ನ ಕಣ್ಣುಗಳನ್ನೇ ನಂಬಲಾಗಲಿಲ್ಲ. ಕೆಲವು ತಾಸುಗಳ ನಿದ್ದೆಯಲ್ಲಿ ಇಂತಹ ಹಲವಾರು ಚಿತ್ರಗಳನ್ನು ಕಂಡು ಆತ ನಿರಾಶನಾಗಿದ್ದನಲ್ಲವೇ? ಇದೂ ಹಾಗೆಯೇ ಕನಸೆಂದು ಭಾವಿಸಿ ತಿಮ್ಮ ಇನ್ನೊಮ್ಮೆ ನಿರಾಶನಾಗಿ ಜಗಲಿಯ ಮೇಲೆ ಒರಗಿಕೊಂಡ.

'ಜೀವಂತ ತಿಮ್ಮನು ದೊರೆತನಲ್ಲಾ' ಎಂಬುದೇ ಶ್ಯಾನುಭಾಗರಿಗೆ ಮಹತ್ತಾದ ಸಂತಸ. ಗೆಳೆಯನನ್ನು, ಇಂತಹ ಸಂದಿಗ್ಧ ಪರಿಸ್ಥಿತಿಯಲ್ಲಿ ತನಗೆ ತಿಳಿಸದಿದ್ದುದಕ್ಕಾಗಿ ಜರೆದರು. ಹಾಗೆಯೇ ಒಬ್ಬರನ್ನೊಬ್ಬರು ಅಪ್ಪಿ ಹಿಡಿದು ತುಸು ಸಮಯ ಮೌನದಿಂದ ಕಳೆದರು.

ತಿಮ್ಮನು ಶ್ಯಾನುಭಾಗರೊಂದಿಗೆ ವೆಂಕಟೇಶ ಕಮ್ತಿಯವರ ಮನೆಗೆ ನಡೆದರು. ಬೀಡಿನ ಶ್ಯಾನುಭಾಗರು ತನ್ನ ಮನೆಗೆ ಅಪರೂಪವಾಗಿ ಬಂದುದನ್ನು ನೋಡಿ ಕಮ್ತಿ ಶ್ಯಾನುಭಾಗರ ಗೌರವಕ್ಕೆ ತಕ್ಕಂತೆ ತುಂಬಾ ಸತ್ಕರಿಸಿದರು.

"ಬನ್ನಿ ಸ್ವಾಮೀ ಶ್ಯಾನುಭಾಗರೇ—ಅಪರೂಪವಾಗಿ ತಮ್ಮಂತಹರ ಮನೆಗೆ ಬರುವುದೆಂದರೆ ನಮಗೆಲ್ಲ ಎಷ್ಟು ಅಭಿಮಾನ. ನೀವು ಬರಬೇಕು—ಬನ್ನಿ. ನೀವು ಅಧಿಕಾರಕ್ಕೆ ಬಂದ ಮೇಲೆ ಬೀಡಿನ ಬಡ ಒಕ್ಕಲುಗಳಿಗೆಲ್ಲಾ ಎಷ್ಟು ಕ್ಷೇಮವಂತೆ. ಆ ಹಿಂದಿನ ಶ್ಯಾನುಭಾಗ ಸೇಸಪ್ಪ ರಾಯರು ವಕ್ಕಲುಗಳ ತಲೆಹೊಡೆದು ಹಣಕೂಡಿಸಿದರು. ಆದರೆ ಹಾಗೆ ಮಾಡಿದ ಹಣ ಏಕಯ್ಯಾ ಶ್ಯಾನುಭಾಗರೇ ನೀವೇ ಹೇಳಿ. ನೋಡಿ, ಹಾಗೆ ಹಣ ಶೇಖರಿಸಿ, ಮುಂದೊಂದು ದಿನ ಸೇಸಪ್ಪಯ್ಯ ಶ್ಯಾನುಭಾಗರು ತೀರಿಹೋದರು. ಅವರು ಹೋಗುವಾಗ ಮಾಡಿದ ಹಣವನ್ನೇನು ಸ್ವರ್ಗಕ್ಕೆ ಕೊಂಡುಹೋಗಲಾಯಿತೆ? ಬಂದಂತೆ ಹಿಂದೆಹೋದ ಮಹಾರಾಯ!"

ಶ್ಯಾನುಭಾಗ ರಾಮಣ್ಣನವರಿಗೆ ಕಮ್ತಿಯವರ ಉಪಚಾರದ ಯಾವ ಮಾತುಗಳೂ ಬೇಕಾಗಿರಲಿಲ್ಲ. ಕಮ್ತಿಯ ಕಳ್ಳಸಂತೆ ಮತ್ತು ಊರ ಜನತೆಗೆ ಮಾಡುವ ತಂಟೆ ಅವರು ಈ ಮೊದಲೇ ತಿಳಿದಿದ್ದರು.

"ಅದೆಲ್ಲಾ ಹಾಗಿರಲಿ ಕಮ್ತಿಯವರೇ. ನಮ್ಮ ತಿಮ್ಮನಿಂದ ನಿಮಗೆಷ್ಟು ಹಣ ಬರಲಿದೆ? ಅದನ್ನು ಸಲ್ಲಿಸಲಿಕ್ಕಾಗಿ ನಾನೇ ಬರಬೇಕಾಯಿತು. ಗಂಟೆ ಹನ್ನೆರಡು ಕಳೆದುಹೋದರೆ ಅವನ ಕುತ್ತಿಗೆಗೆ ಹಗ್ಗ ಗತಿಯಾಗುತಿತ್ತು ಅಲ್ಲವೇ?"

"ಹಾಗೇನೂ ಇಲ್ಲ ಶ್ಯಾನುಭಾಗರೇ—ಅದೆಲ್ಲಾ ಸುಳ್ಳು ಸುದ್ದಿಗಳು. ತಿಮ್ಮನಿಂದ ನನಗೆ ಬರಬೇಕಾದ ಹಣ ಇಂತಿಷ್ಟೆಂದು ಅವನಿಗೇ ಗೊತ್ತು. ಅವನೇ ಒಪ್ಪಿಕೊಂಡಿದ್ದಾನೆ. ಅವನೇ ಹೇಳಲಿ. ಅದರಲ್ಲಿ ನನ್ನದೇನೂ ಆಕ್ಷೇಪವಿಲ್ಲ. ನಾನು ಅಂಥಹ ಜನವೂ ಅಲ್ಲ."

"ತಿಮ್ಮನನ್ನು ನಾನು ಕೇಳುವುದಿಲ್ಲ. ನಿಮಗೆ ತಿಮ್ಮನಿಂದ ಬರಬೇಕಾದ ಹಣವೆಷ್ಟು? ನೀವೇ ಹೇಳಿಬಿಡಿರಿ. ಪ್ರೋಮಿಸರ್ ನೋಟು ಮಾಡಿಸಿಕೊಂಡಿದ್ದೀರಲ್ಲಾ?"

ಕಮ್ತಿ ತಾನು ಹೇಳೆನೆಂದೂ ತಿಮ್ಮನೇ ಹೇಳಿಬಿಡಲೆಂದೂ ಹಟ ಹಿಡಿಯಲಾರಂಭಿಸಿದ.

"ಎಷ್ಟಯ್ಯಾ ತಿಮ್ಮಾ—ಕಮ್ತಿಯವರಿಗೆ ನೀನು ಕೊಡಬೇಕಾದ ಹಣ?" ಶ್ಯಾನುಭಾಗರು ವಿಚಾರಿಸಿದರು.

ತಿಮ್ಮ ತುಸು ಹೊತ್ತು ಆಲೋಚಿಸಿ ಈಗ ಒಂದೊಂದಾಗಿ ಹೇಳತೊಡಗಿದ.

"ಕಳೆದ ಮಳೆಗಾಲದಲ್ಲಿ ಕಮ್ತಿಯರಿಂದ ಪಡಕೊಂಡ ಒಂದು ಮುಡಿ ಅಕ್ಕಿಯ ಕ್ರಯ . . ." ತಿಮ್ಮ ಹೇಳತೊಡಗಿದ.

ಒಂದು ಮುಡಿ ಅಕ್ಕಿಗೆ ರೇಶನ್ ಅಂಗಡಿಯಲ್ಲಿ ಸರಕಾರದ ಅಧಿಕೃತ ದರ ಆಗ ಒಂಭತ್ತು ರೂಪಾಯಿ ಹನ್ನೆರಡಾಣೆ! ಆದರೆ ಹೊರಗೆ ಖಾಸಗಿಯಾಗಿ ಕಳ್ಳಸಂತೆಯಲ್ಲಿ ಹದಿನೈದು, ಇಪ್ಪತ್ತು, ಇಪ್ಪತ್ತೈದು ರೂಪಾಯಿಗಳ ವರೆಗೆ ಏರತೊಡಗಿತು. ಕೆಲವು ಕಾಲ ಕಳೆದೊಡನೆ ಅದು ಮೂವತ್ತು ರೂಪಾಯಿಗಳ ವರೆಗೆ ನಿಂತಿತು. ಮಳೆಗಾಲ ಬಂದೊಡನೆ ಸರಕಾರಿ ರೇಶನ್ ಅಂಗಡಿಯಲ್ಲಿ ಅಕ್ಕಿ ಸೊನ್ನೆಯಾಯಿತು. ಊರಿನ ಇತರ ಖಾಸಗಿ ಕಳ್ಳಸಂತೆಯವರಲ್ಲಿಯೂ ಏನಿಲ್ಲದಾಯಿತು. ಮತ್ತೆ ಇದ್ದುದೆಂದರೆ ಸಾಹುಕಾರ್ ಕಮ್ತಿಯವರಲ್ಲಿ ಮಾತ್ರ. ಹಸಿದ ಜನ ಕಮ್ತಿಯವರ ಕಾಲು ಹಿಡಿದರು. ಅವರಿಂದ ಇವರಿಂದ ಸಾಲತೆಗೆದು ಮಂದಿ ಕಮ್ತಿಯ ಕೈಯಲ್ಲಿ ಹಣ ಸುರಿದು ಅಕ್ಕಿ ಕೊಂಡು ಹೋದರು. ಆ ಬಡಪಾಯಿಗಳಲ್ಲಿ ತಿಮ್ಮನೂ ಒಬ್ಬನು. ಹಿಂದಿನ ಸಲ ಹೇಗಾದರೂ ಮಾಡಿ ತನ್ನ ಹೆಂಡತಿಯ ಉಳಿದಿದ್ದ ಎರಡು ಚಿನ್ನದ ಬಳೆಗಳಲ್ಲಿ ಒಂದನ್ನು ಕಮ್ತಿಯವರಿಗೇ ಮಾರಿ ಅರ್ಧ ಮುಡಿ ಅಕ್ಕಿ ತಂದಿದ್ದ. ನೆಂಟರಿಷ್ಟರು ಬಂದರೆ ಅವರನ್ನು ಹಿಂದೆ ಕಳುಹಿಸಲಾಗುವುದೇ? ಅಣ್ಣನ ಮಕ್ಕಳು, ಅಕ್ಕನ ಮಕ್ಕಳು, ಅತ್ತೆ, ಮಾವ ಹೀಗೆ ಅಮವಾಸ್ಯೆಗೆ, ಹುಣ್ಣಿಮೆಗೆ, ಊರ ಜಾತ್ರೆಗೆ ಸರದಿಯಂತೆ ಅತಿಥಿಗಳು ಬರುತ್ತಲೇ ಇದ್ದರು. ಹೀಗೆ ತಂದ ಅರ್ಧ ಮುಡಿ ಅಕ್ಕಿ ಆರು ದಿನಗಳಲ್ಲಿಯೇ ಮಾಯವಾಯಿತು. ಉಳಿದ ಒಂದು ಬಳೆಯೂ ಮುಂದಿನ ಆರು ದಿನಗಳ ಅಕ್ಕಿಗೆ ಆಹುತಿಯಾಯಿತು. ಆಹಾರದ ಪರಿಸ್ಥಿತಿ ಊರಲ್ಲಿ ಅತೀ ಶೋಚನೀಯವಾಗಿತ್ತು. ಕಮ್ತಿ ಈ ಆಪತ್ಕಾಲದಲ್ಲಿ ಕಳ್ಳಸಂತೆಯ ಮೂಲಕ ಜನತಾಸೇವೆ ಮಾಡತೊಡಗಿದ. ತಿಮ್ಮನ ಅಕ್ಕಿಯ ಪಾತ್ರ ಬರಿದಾಗಿತ್ತು. ಒಂದು ದಿನ ಬರಿಹೊಟ್ಟೆಯ ಅನುಭವ ತಂದೆ ಮಕ್ಕಳಿಗಾಯಿತು. ಮರುದಿನ ತಿಮ್ಮ ಕಮ್ತಿಯವರ ಕಾಲ ಬಳಿಗೇ ನಡೆದ. ಈ ಬಾರಿ ಆತನಲ್ಲಿ ಒಂದು ಚಿಕ್ಕಾಸಿನ ಹಣವಾಗಲೀ ಚಿನ್ನವಾಗಲೀ ಇರಲಿಲ್ಲ.

"ಇಷ್ಟು ಮಂದಿ ಹಣಸುರಿದು ಅಕ್ಕಿ ಕೊಂಡುಹೋಗುವಾಗ ನಿನ್ನಲ್ಲಿ ಹಣವೂ ಇಲ್ಲ—ಏನೂ ಇಲ್ಲ. ಮತ್ತೆ ಹೇಗೆ ಕೊಡಲಯ್ಯಾ?" ಕಮ್ತಿ ಉದ್ರೇಕದಿಂದ ಕೇಳಿದರು. "ಹೇಗಾದರೂ ಒಂದು ಮುಡಿ ದಯಮಾಡಿಸಿರಿ. ನಾನು ನೋಟು ಬರೆದುಕೊಡುತ್ತೇನೆ. ಇನ್ನು ಹದಿನೈದು ದಿನಗಳಲ್ಲಿಯೇ ಬೆಳೆ ಕೊಯ್ಯಲಿದ್ದೇನೆ. ಹೇಗಾದರೂ ಮಾಡಿ ಬದುಕಿಸಿರಿ" ಎಂದು ತಿಮ್ಮನು ಮೊರೆಯಿಟ್ಟ ಮೇಲೆ ಕಮ್ತಿ ತಿಮ್ಮನಿಗೆ ಒಂದು ಮುಡಿ ಅಕ್ಕಿಯನ್ನು ಕೊಟ್ಟರು. ಕಳ್ಳಸಂತೆಯಲ್ಲಿ ಅದರ ಬೆಲೆ ರೂಪಾಯಿ ಐವತ್ತು ಮತ್ತು ಅದನ್ನು ಸಾಲ ಪಡೆದುದಕ್ಕಾಗಿ ಜವಾಬುದಾರರಿಗೆ ರೂಪಾಯಿ ಒಂದು ನೂರರ ಪ್ರೊಮಿಸರಿ ನೋಟಿಗೆ ತಿಮ್ಮನ ಎಡಗೈ ಹೆಬ್ಬೆಟ್ಟಿನ ಮುದ್ರೆ ಬಿದ್ದಿತ್ತು!

ಶ್ಯಾನುಭಾಗರು ಮುಂದೇನಾಯಿತೆಂದು ವಿಚಾರಿಸಿದರು. "ಆಗಲಿ ಒಂದು ಮುಡಿ ಅಕ್ಕಿಯ ಮೌಲ್ಯವೇನು?"

"ಆಗಿನ ಕಾಲದಲ್ಲಿ ಕಮ್ತಿಯವರಲ್ಲಿ ಐವತ್ತು ರೂಪಾಯಿ. ಅದನ್ನು ಸಾಲವಾಗಿ ಪಡೆದ ಬಗ್ಗೆ ಒಂದು ನೂರು ರೂಪಾಯಿಯ ಡಿಮಾಂಡ್ ಪ್ರೊಮಿಸರಿ ನೋಟು."

"ಒಂದು ಮುಡಿ ಅಕ್ಕಿಗೆ ಐವತ್ತು ರೂಪಾಯಿ? ಐವತ್ತು ರೂಪಾಯಿಗೆ ನೂರು ರೂಪಾಯಿಯ ನೋಟು?! ಇದಕ್ಕೆ ನೀನು ನಿನ್ನ ಆತ್ಮ ಸಂತೋಷದಿಂದಲೇ ಒಪ್ಪಿದೆಯಾ ತಿಮ್ಮಾ?" ಶ್ಯಾನುಭಾಗರ ಸವಾಲು.

"ನಾನಲ್ಲ. ಹಸಿದಕರುಳು ಸಂತೋಷದಿಂದಲೇ ಒಪ್ಪಿಕೊಂಡಿತು . . . ."

"ಹೋಗಲಿ . . . . ಮುಂದೇನಿದೆ?" ಶ್ಯಾನುಭಾಗರು ಕೇಳಿದರು.

"ಮುಂದೆಯೂ ಇದೆ. ನನ್ನ ಮಗ ನಿಂಗ ಕಮ್ತಿಯವರ ಹಸುವಿನ ಹಿಂಡನ್ನು ಗ್ರಾಮಾಧಿಕಾರಿಗಳ ಸರಕಾರಿ ದೊಡ್ಡಿಯಲ್ಲಿ ಕಟ್ಟಿದುದರಿಂದ ಕಮ್ತಿಯವರಿಗಾದ ನಗದಿ ನಷ್ಟ ರೂಪಾಯಿ ನಾಲ್ಕು ಮತ್ತು ಆಣೆ ಹನ್ನೆರಡು. ಅದೂ ನನ್ನಿಂದ ವಸೂಲಿಯಾಗಬೇಕು . . . . . . ಇದರಿಂದಾಗಿ ಕಮ್ತಿಯವರಿಗಾದ ಅಪಮಾನಕ್ಕಾಗಿ ರೂಪಾಯಿ ಇಪ್ಪತ್ತೈದು ನಾನು ದಂಡ ತೆರಬೇಕು. ಹೀಗೆ ಒಟ್ಟು ಒಂದು ನೂರ ಇಪ್ಪತ್ತೊಂಭತ್ತು ರೂಪಾಯಿ ಮತ್ತು ಆಣೆ ಹನ್ನೆರಡು . . . . . ."

ಶ್ಯಾನುಭಾಗರು ಕೋಪದಿಂದ ಕಿಡಿಕಿಡಿಯಾಗಿದ್ದರು. ಕಮ್ತಿ ಪಿಟ್ಟೆನ್ನದೆ ಕುಳಿತಿದ್ದ.

"ಕಮ್ತಿಯವರೇ ಬಹಳ ಉತ್ತಮ ಕೆಲಸ ಮಾಡಿದ್ದೀರಿ ತಾನೆ! ಬಡವರ ಎದೆಯನ್ನು ತುಳಿದು ಹೀಗೆಷ್ಟು ಕಾಲ ಇಲ್ಲಿ ಜೀವಿಸಬಯಸುವಿರಿ? ತೋರಿಕೆಗೆ ಸಂಭಾವಿತರಂತೆ ಖಾದಿ ಪೋಷಾಕು ಧರಿಸಿಕೊಂಡು ತಿರುಗಾಡುವಿರಿ. ಸಭ್ಯರಂತೆ ವೇದಿಕೆ ಹತ್ತಿ ಇತರರಿಗೆ ವ್ಯಾಖ್ಯಾನ ಹೇಳುತ್ತೀರಿ. ವೇದಿಕೆ ಇಳಿದೊಡನೆ ಬಡವನ ರಕ್ತವನ್ನು ಹೀಗೆ ಹೀರುತ್ತೀರಿ. ತಿಮ್ಮನಂತಹ ಇನ್ನೆಷ್ಟು ಸಾಧು ರೈತರ ಸಂಸಾರವನ್ನು ಇಲ್ಲಿ ನೀವು ಸುಟ್ಟಿರುವಿರಿ? ನಿಮ್ಮಂತಹ ಬೆಕ್ಕು ಸನ್ಯಾಸಿಗಳಿಂದಾಗಿ ನಮ್ಮ ನಾಡು ಮಸಣವಾಯಿತು. ಹೋಗಲಿ. ನೀವು ಕಳೆದ ಮಳೆಗಾಲದಿಂದ ಈ ತನಕ ಈ ಊರಲ್ಲಿ ಮಾಡಿದ ಕಳ್ಳಸಂತೆಯ ಕುರಿತು ನನಗೆ ಬೇಕಾದಷ್ಟು ನಿದರ್ಶನಗಳು ದೊರೆತಿವೆ. ನಾಳೆಯೇ ಇವರೆಲ್ಲರನ್ನು ಕರೆದುಕೊಂಡು ಕಲೆಕ್ಟರ್ ದೊರೆಗಳವರ ಕಚೇರಿ ಮುಂದೆ ನಿಲ್ಲಿಸುತ್ತೇನೆ. ನೋಡೋಣ—ನಮ್ಮ ಸರಕಾರ ಈ ಮೂಕಜನತೆಯ ನೆರವಿಗೆ ಬರುವುದೋ ಎಂದು? . . . . . ."

ಕಮ್ತಿಗೆ ಕಣ್ಣು ಕಾಣದಾಯಿತು. ಶ್ಯಾನುಭಾಗರು ಈ ಸಲ ಏನಾದರೂ ಒಂದು ಕೆಲಸಮಾಡಿ ತನ್ನನ್ನು ಗಂಡಾಂತರದಲ್ಲಿ ಸಿಕ್ಕಿಸದೆ ಇರಲಾರನೆಂಬ ಭೀತಿ ಹುಟ್ಟಿತು. ದಾಮೋದರನನ್ನು ಬಯಲಿಗಟ್ಟಿ ಶ್ಯಾನುಭಾಗರಿಗೆ ಸೀಯಾಳ* ಕಡಿಯಲು ಕಮ್ತಿ ಆಣತಿ ಇತ್ತರು. ಆದರೆ ಶ್ಯಾನುಭಾಗರು ಆತನ ಮನೆಯ ನೀರು ಕೂಡಾ ಕುಡಿಯಲಿಲ್ಲ.

"ಅದು ಹೇಗೂ ಇರಲಿ. ನೋಡಿರಿ ಕಮ್ತಿಯವರೇ. ನಿಮ್ಮಿಂದ ತಿಮ್ಮನು ಕೊಂಡುಹೋದ ಒಂದು ಮುಡಿ ಅಕ್ಕಿಯ ಸರಕಾರಿ ಅಧಿಕೃತ ಬೆಲೆ ಒಂಭತ್ತು ರೂಪಾಯಿ ಹನ್ನೆರಡಾಣೆ. ಒಂದು ಮುಡಿ ಅಕ್ಕಿಗೆ ಐವತ್ತು ರೂಪಾಯಿ ಬೆಲೆ ಸ್ವೀಕರಿಸಿದೆನೆಂದು, ರಸೀದಿ ಕೊಡುವಿರೆಂದರೆ ಐವತ್ತು ರೂಪಾಯಿ ಕೊಡುವುದಕ್ಕೂ ನಾವು ಸಿದ್ಧರಾಗಿದ್ದೇವೆ. ಇಲ್ಲವಾದರೆ ಸರಕಾರದ ಅಧಿಕೃತ ಬೆಲೆಯನ್ನು ಸ್ವೀಕರಿಸಿಕೊಂಡು ನೋಟು ಹಿಂದೆ ಕೊಟ್ಟುಬಿಡಿರಿ. ಮತ್ತೆ, ಐವತ್ತು ರೂಪಾಯಿಯ ಸಾಲಕ್ಕೆ ನೂರು ರೂಪಾಯಿಯ ನೋಟು; ನಿಮ್ಮ ಹಸುಹಿಂಡು ಪೈರುತಿಂದು ನಾಶಮಾಡಿದ ಕಾರಣ ಯಾರಾದರೂ ಸರಕಾರಿ ದೊಡ್ಡಿಯಲ್ಲಿ ಕಟ್ಟಿದರೆ ಅದರ ಬಾಬ್ತು ದಂಡ ಮತ್ತು ಅದರಿಂದಾದ ಅಪಮಾನಕ್ಕೆ ಪರಿಹಾರ ದ್ರವ್ಯ ರೂಪಾಯಿ ಇಪ್ಪತ್ತೈದು ಇತ್ಯಾದಿ ನಿಮ್ಮಿಂದ

* ಎಳನೀರು.

ಸಾಧ್ಯವಿದ್ದರೆ ವಸೂಲು ಮಾಡಿಕೊಳ್ಳಿರಿ. ಈ ಊರಲ್ಲಿ ನಿಮ್ಮಂತೆ ಮೀಸೆ ಹೊತ್ತವರು ಇನ್ನೂ ಅನೇಕರಿರುವರೆಂದು ಇನ್ನಾದರೂ ತಿಳಿದುಕೊಳ್ಳಿರಿ ಕಮ್ತಿ ಯರೇ." ಶ್ಯಾನುಭಾಗರ ಮಾತಿನಲ್ಲಿಯೂ ಆವೇಶ ಒಡೆದು ಕಾಣುತಿತ್ತು. ತನ್ನ ಹಣದ ಚೀಲದೊಳಗೆ ಕೈಹಾಕಿ ಒಂಭತ್ತು ರೂಪಾಯಿ ಹನ್ನೆರಡಾಣೆ ತೆಗೆದು ಕಮ್ತಿಯ ಕೈಯಲ್ಲಿ ಹಾಕಿದರು. ಕಮ್ತಿಯೊಮ್ಮೆ ಮೇಲೆ ಕೆಳಗೆ ನೋಡಿ, ಅರ್ಧ ತಾಸು ಯೋಚಿಸಿ, ಹಣಪಡೆದು ತಿಮ್ಮನ ನೋಟನ್ನು ಹಿಂದೆ ಕೊಟ್ಟ! ಎಂತಹ ವ್ಯತ್ಯಾಸ!

ನೂರ ಇಪ್ಪತ್ತೊಂಭತ್ತು ರೂಪಾಯಿ ಹನ್ನೆರಡಾಣೆಯ ಅನ್ಯಾಯದ ಲೆಕ್ಕದಲ್ಲಿ ಅವನಿಗೆ ನ್ಯಾಯುವಾದ ಒಂಭತ್ತು ರೂಪಾಯಿ ಹನ್ನೆರಡಾಣೆ ಮಾತ್ರ ದೊರೆಯಿತು!

ಬೀಡಿನ ಶ್ಯಾನುಭಾಗರಿಗೆ ಸರಕಾರಿ ನೌಕರರಿಂದ ದೊರಕುವ ಮನ್ನಣೆ —ಗೌರವಗಳು ಕಮ್ತಿಗೆ ಚೆನ್ನಾಗಿ ಗೊತ್ತಿತ್ತು. ಅದಕ್ಕಾಗಿ ತಿಮ್ಮನೂ ಶ್ಯಾನುಭಾಗರೂ ತನ್ನ ಮನೆಯಿಂದಿಳಿದು ಹೋಗುವಾಗ ಕಮ್ತಿ ಬಾಕಿಮಾರು ಗದ್ದೆಯ ತನಕ ಅವರನ್ನು ಹಿಂಬಾಲಿಸಿದ್ದ. ಅಲ್ಲೊಮ್ಮೆ ಗದ್ದೆಯಂಚಿನಲ್ಲಿ, ಶ್ಯಾನುಭಾಗರನ್ನು ತುಸು ದೂರ ಕರೆದು ನಿಲ್ಲಿಸಿ ತನ್ನ ಮೇಲೆ ಕೋಪದಿಂದ ಏನೂ ಮಾಡಬಾರದೆಂದು ವಿಜ್ಞಾಪಿಸಿಕೊಂಡನು. ಕಮ್ತಿಗೆ ಮಕ್ಕಳಂತೆ ಅಳಲೂ ಬರುತ್ತಿದೆ. ಶ್ಯಾನುಭಾಗರ ಮುಂದೆ ಕಪಟದ ಒಂದೆರಡು ಕಂಬನಿ ಸುರಿಸಲಿಕ್ಕೂ ಸಾಕು.

---

## 12

ಕಮಲನಿಗೆ ನಾಗಿಯ ಮೇಲಿನ ಇತರ ಕೋಪಗಳೊಂದಿಗೆ ಆಕೆಯ ಚಿಕ್ಕ ಮಗುವಿಗೆ ಹೆಸರಿಡುವಾಗ ತನ್ನನ್ನು ಕೇಳಿಲ್ಲವೆಂಬ ಇನ್ನೊಂದು ಮಹತ್ತರವಾದ ಸಿಟ್ಟು. ಮಗುವಿಗೆ ಹೆಸರಿಡುವಾಗ ಯಾವ ಹೆಸರಿಡೋಣವೆಂದು ನಾಗಿ ಮಾಧವನಲ್ಲಿ ಕೇಳಿದ್ದಳು. ನೀಲಿಯಲ್ಲಿ ಕೇಳಿದ್ದಳು. ಹಾಗಿದ್ದರೆ ಈಕೆಗೆ ಬೇಡವಾದವಳು ತಾನೊಬ್ಬಳೇ ಇರಬಹುದೆಂದು ಕಮಲ ಸಿಟ್ಟುಗೊಂಡಳು.

ತನ್ನ ಗಂಡನ ಮತ್ತು ತನ್ನ ಬಟ್ಟೆಗಳ ಮೂಟೆಯನ್ನು ಹೆಗಲಮೇಲೆ ಹಾಕಿಕೊಂಡು ಕಮಲ ಊರ ಕೆರೆಗೆ ಅವುಗಳನ್ನು ತೊಳೆಯುವುದಕ್ಕಾಗಿ ಹೋದಳು. ಅಲ್ಲಿ ಆಕೆಗೆ ಯಾವಾಗಲೂ ಭೇಟಿಯಾಗುತಿದ್ದವಳೆಂದರೆ

ಆಕೆಯ ಚಿರಪರಿಚಿತಳಾದ ಸಾಹುಕಾರ್ ವೆಂಕಟೇಶ ಕಮ್ತಿಯವರ ಪತ್ನಿ ಭಾಗೀರಥಿ ಬಾಯಿಯವರು. ಕಮ್ತಿಯವರು ತಂದ ಹಸುವಿನ ಹಿಂಡಿನಿಂದ ತೊಡಗಿ ಅವರ ಮಾತುಕತೆ ಆ ಊರ ಎಲ್ಲಾ ರಾಜಕೀಯವನ್ನೂ ಆವರಿಸಿ ಕೊಂಡಿತು. ಮೊದಲು ಮೊದಲು ಶ್ಯಾನುಭಾಗರ ಅಣ್ಣನ ಹೆಂಡತಿಯಾದು ದರಿಂದ ಕಮಲುವಿನೊಡನೆ ಭಾಗೀರಥಿ ಬಾಯಿಯವರು ಶ್ಯಾನುಭಾಗರ ಕುರಿ ತಾಗಲೀ ಅವರ ಹೆಂಡತಿಯ ಕುರಿತಾಗಲೀ ಏನೊಂದೂ ಬೇಡದ ಮಾತನ್ನು ಆಡಿಕೊಳ್ಳಲು ಅಂಜುತ್ತಿದ್ದರು. ಆದರೆ ದಿನಹೋಗುತ್ತಾ ಕಮಲುವಿನ ಮಾತಿನಲ್ಲಿ ಅವಳಿಗೆ ಅನುಕೂಲತೆಗಳು ಉಂಟಾಗುತಿದ್ದುವು. ತನ್ನ ಮನೆಯು ವರ ಕಡೆಗೆ ಒಂದು ತೆರನಾದ ಅಲಕ್ಷ್ಯ—ಶ್ಯಾನುಭಾಗರ ಮತ್ತು ಅವರ ಹೆಂಡತಿಯ ಕುರಿತಾದ ಅವಹೇಳನ—ಕಮಲನ ಮಾತಿನಲ್ಲಿ ಸಂಖ್ಯೆಮೀರಿ ಕೇಳತೊಡಗಿದುದರಿಂದ ಭಾಗೀರಥಿ ಬಾಯಿಯವರಿಗೆ ತುಂಬಾ ಸಲುಗೆ ಉಂಟಾ ಯಿತು.

"ಆ ಮನೆಯಲ್ಲಿ ಬಾಳುವೆ ಮಾಡುವುದಕ್ಕಿಂತ ನನಗೆ ಸಾಯುವುದೇ ಲೇಸಕ್ಕ." ಎಂದು ಕಮಲನ ಬಾಯಿಯಿಂದ ಬಿದ್ದುದೇ ತಡ—ಭಾಗೀರಥಿ ಯವರು ತಮ್ಮ ಚಾಣಕ್ಯ ತಂತ್ರವನ್ನು ಹೂಡತೊಡಗಿದರು.

"ನೋಡಕ್ಕಾ ಕಮಲು—ನಿನ್ನೆ ನಮ್ಮ ಯಜಮಾನರು ಹೇಳುತ್ತಿದ್ದರು. . . . . ಪಾಪ ಆ ಕಮಲು ಮತ್ತು ಆಕೆಯ ಗಂಡ ಮಾಧವರಿಗಾಗಿ ನಾನು ವ್ಯಸನಿಸುತ್ತೇನೆ. ಅವರು ಆ ಮನೆಯಲ್ಲಿ ಇದ್ದರೂ ಸತ್ತಂತೆ. ಎಲ್ಲವೂ ಶ್ಯಾನುಭಾಗರ ವಹಿವಾಟು. ಮಾಧವ ಮಾತ್ರ ಗದ್ದೆಯಲ್ಲಿ ಬೆವರುಬಿಟ್ಟು ದುಡಿಯುತ್ತಾನೆ. ಶ್ಯಾನುಭಾಗರಿಗೆ ಊರಲ್ಲೆಲ್ಲಾ ಸತ್ಕಾರ—ಗೌರವಗಳು. ಮಾಧವ ನಾಯಿಯಂತೆ ದುಡಿಯುತ್ತಿರಬೇಕೆಂದೇ ಶ್ಯಾನುಭಾಗರದೂ ಇಚ್ಛೆ. ಹೋಗಲಿ—ಅಣ್ಣನ ಹೆಂಡತಿ ಕಮಲುವಿಗೂ ತಮ್ಮನ ಹೆಂಡತಿಗೂ ಎಷ್ಟು ಅಜಗಜಾಂತರ ವ್ಯತ್ಯಾಸ! ಒಬ್ಬಳು ಕುಬೇರನ ಕುವರಿಯಂತೆ ನೆನಸಿಕೊಂಡರೆ ಇನ್ನೊಬ್ಬಳು ದರಿದ್ರನಾರಾಯಣನ ಪ್ರಥಮ ಪುತ್ರಿಯಾಗಿದ್ದಾಳೆ".

ಕಮಲನಿಗೆ ಈ ಊರಿನಲ್ಲಿ ತನ್ನ ಮೇಲೆ ಸಹಾನುಭೂತಿ ಪಡುವವರು, ಅನುತಾಪ ತೋರುವವರು ಕಮ್ತಿ ಮತ್ತು ಅವರ ಹೆಂಡತಿ ಭಾಗೀರಥಿ ಬಾಯಿ ಹೀಗೆ ಎರಡು ಮಂದಿಯಾದರೂ ಇರುವರಲ್ಲವೇ ಎಂಬ ನಲ್ಮೆ ಮೂಡಿತು.

"ಹೌದು ಬಾಯಿಯವರೇ—ನನಗೆ ಆ ಮನೆ ಮಸಣದಂತಾಗಿದೆ. ನನ್ನ

ಗಂಡನಲ್ಲಿ ಮನೆ ಬದಲಾಯಿಸದಿದ್ದರೆ ನಾನು ಪ್ರಾಣವೇ ತೆಗೆದುಕೊಳ್ಳುವೆನೆಂದು ಹೇಳಿದ್ದೇನೆ. ಪ್ರಾಯಶಃ ಮುಂದಿನ ವಾರ ಅವರೇ ಮನೆ ಬದಲಾಯಿಸುವ ವ್ಯವಸ್ಥೆ ಮಾಡಬಹುದು. ಹೆಚ್ಚು ದೂರವಿಲ್ಲ.—ಅದೇ ಬಾಕಿಮಾರು ಗದ್ದೆಯ ನೆತ್ತಿಯಲ್ಲಿ. ಬೀಡಿನ ಧನಿಯವರ ಸ್ಥಳದಲ್ಲೇ ಮನೆಯೊಂದು ಖಾಲಿಯಿದೆಯಂತೆ. ಏನಮ್ಮಾ ಶ್ಯಾನುಭಾಗರ ಹೆಂಡತಿಯಂತಹ ಅನುರೂಪ ಸುಂದರಿಯರಿರುವಾಗ ಮನೆಕೊಡುವ ಒಂದಲ್ಲ ಸಾವಿರ ಧನಿಯವರು ಇರಲಾರರೇ?"



ಭಾಗೀರಥಿಯವರ ಸಂತಸ ಹೇಳಿತೀರದು. ಆ ಮಾತು ಈ ಮಾತು ಹೇಳಿ ಕಮಲುವನ್ನು ಕೋಪದ ಪರಮಾವಧಿಗೆ ಮುಟ್ಟಿಸಿದರು. ಕಮಲುವಿಗೆ ಈ ತನಕ ಸಂತತಿ ಪ್ರಾಪ್ತಿಯಾಗದುದಕ್ಕೆ ತನ್ನದೂ ಕಳವಳ ಸೂಚಿಸಿದರು.

"ಆಗಲವ್ಮಾ ಕಮಲೂ—ನೀನೇನೂ ಮುದುಕಿಯಾಗಿಲ್ಲವಲ್ಲಾ. ಭಗವಂತನ ಕೃಪೆಯಿದ್ದರೆ ಒಂದಲ್ಲ—ಹತ್ತು ಮಕ್ಕಳನ್ನು ಪಡೆಯುವ ಪ್ರಾಯವಿಲ್ಲವೇ ನಿನ್ನಲ್ಲಿ? ಹೇಗಾದರೂ ಆ ಶನಿಗಳು ಮನೆಬಿಟ್ಟು ಹೋದರೆ ನಿಮ್ಮ ಗ್ರಹಚಾರಗಳು ಮುಗಿದು ನಿಮಗೆ ಸಿರಿಯೊಲಿದು, ಸಂತಾನವೂ ಪ್ರಾಪ್ತಿಯಾಗದಿರದು . . . . . "

ಹೀಗೆ ಭಾಗೀರಥಿ ಹೇಳುವಾಗ ಕಮಲು ತನ್ನ ದುರ್ದೆಸೆಯನ್ನು ನೆನೆದು ಬಿಕ್ಕಿ ಬಿಕ್ಕಿ ಅತ್ತುಕೊಂಡಳು. ಕಮ್ತಿಯ ಹೆಂಡತಿ ತನ್ನ ಸೆರಗಿನಿಂದ ಆಕೆಯ ಕಣ್ಣೊರಸಿದಳು. "ಅಳದಿರಮ್ಮಾ ಇನ್ನು. ನನ್ನ ಭಾವನ ಹೆಂಡತಿಯೂ ಹೀಗೆನೆ ಹೆರುತ್ತಿರಲಿಲ್ಲ ನೋಡು. ಎಲ್ಲಾ ದೈವ ದೇವರುಗಳಿಗೆ ಹರಕೆ ಹೊತ್ತಳು. ಹೆಣ್ಣು ಕರುಳಲ್ಲವೆ? ಮಕ್ಕಳಿಲ್ಲವಾದರೆ ಅದಕ್ಕಿಂತ ದೊಡ್ಡ ವ್ಯಾಧಿ ಬೇರೆ ಇದೆಯೇ? ಆಕೆ ದಿನಹೋದಂತೆ ಕೃಶವಾಗುತ್ತ ಬರತೊಡಗಿದಳು. ಕಟ್ಟಕಡೆಗೆ ಯಾರೋ ಹಿಮಾಲಯದಿಂದ ಬಂದ ಸನ್ಯಾಸಿಯಂತೆ ಏನೋ ವನಸ್ಪತಿಗಳ ಬೇರನ್ನು ಅರೆದು ಕುಡಿಯಿರೆಂದು ಆಕೆಗೆ ಕೊಟ್ಟ. ಮುಂದಿನ ವರ್ಷವೇ ಆ ಸೌಭಾಗ್ಯವತಿ ಒಂದು ಗಂಡುಮಗುವನ್ನು ಹೆತ್ತಳು. ನೋಡಮ್ಮಾ—ನಾನು ನಾಳೆ ದಾಮೋದರನನ್ನು ಅವರ ಮನೆಗೆ ಅಟ್ಟುತ್ತೇನೆ. ಆ ಔಷಧಿ ಪೂರಾ ಮುಗಿದಿರಲಿಕ್ಕಿಲ್ಲವೆಂದು ನನ್ನ ಭರವಸೆ. ಉಳಿದಿದ್ದರೆ ಅವರು ಖಂಡಿತ ಕೊಟ್ಟೇ ಕೊಡುವರು. ಚಿಂತಿಸಬೇಡ. ಆದರೆ ಒಂದು ಸಂಗತಿ ಮಾತ್ರ ಮರೆಯಬೇಡ. ಎಂದಿನ ತನಕ ನಿನ್ನ ಶ್ಯಾನುಭಾಗ—ದಂಪತಿ

ಗಳು ನಿಮ್ಮೊಡನೆ ಒಂದೇ ಮನೆಯಲ್ಲಿ ಇರುವರೋ ಅಲ್ಲಿ ವರೆಗೆ ನಿಮಗೆ ಕ್ಷೇಮ ದೊರೆಯಲಾರದು. ನಾಗಿಗೆ ತನ್ನ ಗಂಡ ಬೀಡಿನ ಶ್ಯಾನುಭಾಗರಾದು ದೆಂದರೆ ಮದ್ರಾಸು ಮಂತ್ರಿಮಂಡಳದಲ್ಲಿ ಒಂದು ಸ್ಥಾನ ದೊರಕಿದುದೆಂದು ಭಾವಿಸಿದ್ದಾಳೆ. ತಾನೊಂದು ಮಗು ಹೆತ್ತು ಸ್ವರ್ಗಲೋಕವನ್ನೇ ಇಲ್ಲಿಗೆ ತಂದಿರುವಳೆಂದು ಭಾವಿಸಿದ್ದಾಳೆ. ಆಕೆ ನಿಮ್ಮ ಮನೆಗೆ ಮಾತ್ರವಲ್ಲಾ—ನಮ ಗೆಲ್ಲಾ ಹಗೆಯಾಗಿದ್ದಾಳೆ. ನೀನು ನೆರವು ನೀಡುವಿಯಾದರೆ ಆಕೆಯನ್ನು ಈ ಊರಿನಿಂದಲೇ ಓಡಿಸುವ ಉಪಾಯವೂ ಅದಕ್ಕೆ ತಕ್ಕ ಶಕ್ತಿಯೂ ನನ್ನ ಲ್ಲಿದೆ." ಎಂದು ಮುಂತಾಗಿ ತನ್ನ ಶಕುನಿ ತಂತ್ರವನ್ನು ಕಮಲುವಿನ ಕಿವಿಯಲ್ಲಿ ಊದಿದಳು.

ಇಬ್ಬರಿಗೂ ಬಟ್ಟೆ ಒಗೆದು ಮುಗಿದುದರಿಂದ ಅವರು ಕೆರೆಬಿಟ್ಟು ತಂತಮ್ಮ ಮನೆಗಳ ದಾರಿಹಿಡಿದು ಸಾಗಿದರು. ದಾರಿಯಲ್ಲಿ ತೆಂಗಿನ ಮರದಿಂದ ಬಿದ್ದ ಒಣಗರಿಗಳನ್ನು ಕೂಡಿಸುತಿದ್ದ ಮಮ್ಮದೆ ಬ್ಯಾರಿಗಳ ಹೆಂಡತಿ ಬೀಪಾತುಮ್ಮ ನವರನ್ನು ದೂರದಿಂದಲೇ ಕಂಡರು. ಕಮಲು ಸಿಕ್ಕಿದಾಗಲೆಲ್ಲಾ ಬಿಪಾತುಮ್ಮ ಆಕೆಯನ್ನು ತಡೆದು ನಿಲ್ಲಿಸಿ, ಒಂದರ್ಧ ತಾಸು, ಪ್ರೀತಿಯಿಂದ ಮಾತನಾಡಿಸಿ ಬಿಡುವ ವಾಡಿಕೆ. ಆದರೆ ಈ ಬಾರಿ ಭಾಗೀರಥಿಯವರು ಅದಕ್ಕೆ ಅವಕಾಶ ಕೊಡಲಿಲ್ಲ.

"ನೋಡು ಕಮಲಕ್ಕಾ—ಆ ಸುಟ್ಟ ಮುಖದವಳೊಡನೆ ಇನ್ನು ಮುಂದೆ ಮಾತನಾಡಬೇಡ. ನಮ್ಮ ಹಿಂದುಗಳೆಂದರೆ ಅವರು ಹಿಂದಿನಿಂದ ಮಂಡಿಗೆ ಕಡಿದುಕೊಳ್ಳುತ್ತಾರೆ. ನಮ್ಮನ್ನು ಅವರಿಗೆ ಕಂಡರೆ ಆಗುವುದಿಲ್ಲ. ಶತಮಾನ ಗಳಿಂದ ಒಂದಾಗಿದ್ದ ಅಖಂಡ ಭಾರತ ಭೂಮಿಯನ್ನು ಎರಡು ಪಾಲು ಮಾಡಿ ಅವರ ಪಾಲಿನ ಪಾಕಿಸ್ಥಾನವನ್ನು ಅವರು ತೆಗೆದುಕೊಂಡರಂತೆ. ಇನ್ನು ಅವ ರಿಗೂ ನಮಗೂ ಯಾವ ಸಂಬಂಧವೂ ಇಲ್ಲ. ಈ ವಿಚಾರ ಮೊನ್ನೆ ನಾನು ನನ್ನ ಭಾವನ ಮಗಳ ಮದುವೆಗೆ ಮಂಗಳೂರಿಗೆ ಹೋಗಿದ್ದಾಗ ತಿಳಿಯಿತು . . . . . . ." ಇಷ್ಟು ಮಾತು ಮುಗಿಯುವಾಗ ಅವರು ಬೀಪಾತು ನಿಂತಿದ್ದ ಸ್ಥಳದಿಂದ ಹತ್ತು ಮಾರು ದೂರ ನಡೆದು ಬಿಟ್ಟಿದ್ದರು. ಅಲ್ಲಿಂದ ಇಬ್ಬರೂ ತಮ್ಮ ತಮ್ಮ ಮನೆಗಳ ಹಾದಿ ಹಿಡಿದು ನಡೆದರು.

---

## 13

ತಿಮ್ಮನ ಸಾಲ ತೀರಿಸಿ ಶ್ಯಾನುಭಾಗರು ಮನೆಸೇರುವಾಗ ತನ್ನ ಹಿಂದಿನ ಪೇಟೆಯ ಸಾಲೆಯ ಪತ್ರವೊಂದು ಅವರಿಗಾಗಿ ಕಾಯುತಿತ್ತು. ತನ್ನ ಕೆಲಸಗಳ ಕುರಿತು ರಾಮಣ್ಣ ಪೇಟೆಗೆ ಹೋದಾಗಲೆಲ್ಲಾ ತನ್ನ ಹಿಂದಿನ ಸಾಲೆಯನ್ನು ದೂರದಿಂದ ನೋಡಿ ಸಂತಸಪಟ್ಟುಕೊಳ್ಳುತಿದ್ದನು. ಅಪರೂಪವಾಗಿ ಒಮ್ಮೊಮ್ಮೆ ಮುಖ್ಯೋಪಾಧ್ಯಾಯರನ್ನು ಕಂಡು ಮಾತನಾಡಿ ಬರುವುದುಂಟು. ತನ್ನ ಮದುವೆಗೆ ಮುಖ್ಯೋಪಾಧ್ಯಾಯರಿಗೂ ಆಹ್ವಾನವಿತ್ತಿದ್ದನು. ಆದರೆ ಅವರಿಗೆ ಶಾಲೆಯ ಮೇಲಾಧಿಕಾರಿಗಳ ಆಗಮನದಿಂದಾಗಿ ರಾಮಣ್ಣನ ಮದುವೆಗೆ ಬರಲು ಅವಕಾಶವಿರಲಿಲ್ಲ. ತನ್ನ ಹಿಂದಿನ ವಿದ್ಯಾರ್ಥಿಗಳು ಉತ್ತಮ ಸ್ಥಿತಿಯಲ್ಲಿ ಜೀವನ ನಡೆಸುತ್ತಿರುವರೆಂದು ತಿಳಿದರೆ ಮುಖ್ಯೋಪಾಧ್ಯಾಯರಿಗೆ ಎಲ್ಲಿಲ್ಲದ ಪ್ರೀತಿ.

ಚೆನ್ನಾಗಿ ಕಲಿಯುವ ವಿದ್ಯಾರ್ಥಿಗಳ ಮೇಲೆ ಉಪಾಧ್ಯಾಯರುಗಳಿಗೆ ಹೆಚ್ಚು ಪ್ರೀತಿ. ರಾಮಣ್ಣ ಸಾಲೆಯಲ್ಲಿ ಕಲಿಯುತಿದ್ದಾಗ ಮೊದಲನೆ ವರ್ಗದಲ್ಲೆ ಪಾಸಾಗುತಿದ್ದುದು. ಅದಕ್ಕಾಗಿ ಪ್ರಯತ್ನಪಟ್ಟು ಮುಖ್ಯೋಪಾಧ್ಯಾಯರು ಅವನು ಕೊಡಬೇಕಾಗುತಿದ್ದ ಶಾಲಾಸಂಬಳದಲ್ಲಿ ತುಂಬಾ ಕಡಿತ ಮಾಡಿದ್ದರು. ಪಾಟಗಳಲ್ಲಿ ಜಾಣನಿದ್ದಂತೆ ಆಟಗಳಲ್ಲಿಯೂ ರಾಮಣ್ಣ ಜಾಣನೇ ಆಗಿದ್ದ. ಅಂತರ ಶಾಲಾ ಸ್ಪರ್ಧೆಗಳಲ್ಲಿ ಪ್ರತಿಬಾರಿಯೂ ಶಾಲೆಗೆ ಯಶಸ್ಸು ತರಲು ಕಾರಣ ರಾಮನೇ ಎಂದು ಡ್ರಿಲ್ ಮಾಸ್ತರರೂ ಶಿಫಾರಸು ಮಾಡುತಿದ್ದರು. ಡ್ರಿಲ್ ಮಾಸ್ತರರ ಬಾಯಿಯಿಂದ ಪ್ರಶಂಸಿಸಲ್ಪಡುವುದೆಂದರೆ ಬಹಳ ಪ್ರಯಾಸದ ಕೆಲಸವೇ. ಅವರು ಅಂತಹ ಒಂದು 'ಸ್ಟ್ರಿಕ್ಟ್' ವ್ಯಕ್ತಿ. ಅವರ ನಿಯಮದಂತೆ ನಡೆಯದ ವಿದ್ಯಾರ್ಥಿಗಳಿಗೆ ಹಿಂದುಮುಂದು ನೋಡದೆ ಚಾಟಿಯ ಸ್ಪರ್ಶ ಮಾಡಿಬಿಡುತ್ತಾರೆ. ಅವರ ಚಾಟಿಗೆ ಬಡವರ ಮಗ ಶ್ರೀಮಂತರ ಮಗ ಎಂಬ ವ್ಯತ್ಯಾಸವೇನೂ ಇಲ್ಲ. ಒಮ್ಮೆ ಅವರ ಮೇಲೆ ಮೇಲಾಧಿಕಾರಿಗಳಿಗೆ ಕೆಲವು ತಳ್ಳಿ ಅರ್ಜಿಗಳೂ ಹೋಗಿದ್ದುವಂತೆ. ವಿದ್ಯಾರ್ಥಿಗಳಿಗೆ ಪೆಟ್ಟುಹೊಡೆಯುವ ಅಧಿಕಾರ ಉಪಾಧ್ಯಾಯರಿಗಿಲ್ಲವೆಂಬುದೆ ಅರ್ಜಿಹಾಕಿದವರ ವಾದ. ತನಿಖಿ ಸಮಯದಲ್ಲಿ ಡ್ರಿಲ್ ಮಾಸ್ತರರು ಅಧಿಕಾರಿಗಳ ಮುಂದೆ ಇಷ್ಟೇ ಹೇಳಿದುದಂತೆ. "ಇಷ್ಟು ಮಂದಿ ವಿದ್ಯಾರ್ಥಿಗಳಲ್ಲಿ ಯಾರಿಗಾದರೂ ಯಾವಾಗಲಾದರೂ ನಾನು ಒಂದೇ ಒಂದು ಪೆಟ್ಟು ಹೊಡೆ

ದಿರುವೆನೆಂದು ಯಾರಾದರೂ ಮುಂದೆ ಬಂದು ಹೇಳುವವರಿದ್ದರೆ ನಾನು ಈಗಲೇ ನನ್ನ ಕೆಲಸಕ್ಕೆ ರಾಜಿಕೊಟ್ಟು ಬಿಡುವೆನು". ವಿದ್ಯಾರ್ಥಿಗಳನ್ನು ಅಧಿಕಾರಿಗಳು ಸಾಮೂಹಿಕವಾಗಿ ವಿಚಾರಿಸಿದರು. ಎಲ್ಲರ ಬಾಯಿಗೆ ಬೀಗ ಹಾಕಿದಂತಾಗಿತ್ತು. ಒಬ್ಬನಾದರೂ ಹೇಳಬೇಕೆ? ಹೇಳುವುದು ಹೇಗೆ? ಹೇಳಿದರೆ ಅಧಿಕಾರಿಗಳು ಹೋದನಂತರ ಚಾಟಿ ಅಧಿಕಾರಿಗಳು ಪುನಃ ತಮ್ಮಲ್ಲಿ ವಿಚಾರಣೆ ಮಾಡಲಿದೆ ಎಂದು ವಿದ್ಯಾರ್ಥಿಗಳಿಗಲ್ಲದೆ ಇನ್ಯಾರಿಗೆ ತಾನೆ ಗೊತ್ತು? ಹೀಗೆಲ್ಲಾ ಬಹಳ ಸಾಹಸಿ ಅವರು. ಮತ್ತೆ ಅವರ ಕುರಿತು ಒಂದು ಮಾತು. ಆ ಶಾಲೆಯಲ್ಲಿ ಅವರಂತೆ ಇಂಗ್ಲಿಷು ಮಾತನಾಡುವವರು ಇನ್ನಾರೂ ಇಲ್ಲವೆಂದು ಅವರೇ ಹೇಳುತ್ತಾರೆ.

"ಒಫ್‌ಕೋರ್ಸ್....... ನಾನು ಟಾಕ್ ಮಾಡುವಾಗ ಎಷ್ಟೋ ಗ್ರಾಮ್ಮರ್ ಮಿಸ್ಟೇಕುಗಳು ಬರಬಹುದು. ಆದರೆ ನನ್ನಷ್ಟು ಕ್ವಿಕ್ ಕ್ವಿಕ್ (ಬೇಗ ಬೇಗ) ಆಗಿ ಮಾತನಾಡಲು ಹೆಡ್‌ಮಾಸ್ತರರಿಗೂ ಇಂಪೋಸಿಬ್ಲ್ ಆಗುತ್ತದೆ" ಎಂದು ಅವರೇ ಹೇಳಿಬಿಡುತ್ತಾರೆ.

'ತಪ್ಪಾಗಲೀ—ಸರಿಯಾಗಲೀ, ಧೈರ್ಯಮಾಡಿ ಮಾತಾಡಿದರೇನೇ ಅಭ್ಯಾಸವಾಗುತ್ತದೆ.' ಎಂಬುದೇ ಇತರರಿಗೆ ಅವರ ಉಪದೇಶ. ಆಟದ ಬಯಲಲ್ಲಿ ಅವರು ಹುಡುಗರನ್ನು ಸಾಲಾಗಿ ನಿಲ್ಲಿಸಿ 'ಲೆಫ್ಟ್ ರೈಟ್' ಮಾಡಿಸಿ ಮಾರ್ಚ್ ಮಾಡಿಸುವಾಗ ಅವರ ಗಂಭೀರತೆ ಕಮಾಂಡರ್ ಕರಿಯಪ್ಪನವರಿಗೂ ಇರಲಿಕ್ಕಿಲ್ಲ!

ಡ್ರಿಲ್ ಮಾಸ್ತರರ ಕತೆ ಹಾಗಾದರೆ ಕನ್ನಡ ಪಂಡಿತರ ಕತೆಯೇ ಇನ್ನೊಂದು. ವಿದ್ಯಾರ್ಥಿಗಳೆಲ್ಲಾ ಅವರಲ್ಲಿ ಶೈಲಿಯಿಂದಲೇ ಮಾತನಾಡಿದರೆ ಅವರಿಗೆ ಬಹಳ ಸಂತೋಷವಾಗುತ್ತಿದೆ. ಅವರನ್ನು 'ಸಾರ್' ಎನ್ನಬಾರದು. 'ಗುರುದೇವ' ಎನ್ನಬೇಕು. ಒಮ್ಮೊಮ್ಮೆ ಉಪಾಯವಿಲ್ಲದಲ್ಲಿ ಮಾತ್ರ ಅರ್ಧ ಇಂಗ್ಲಿಷ್ ಅರ್ಧ ಅಚ್ಚಗನ್ನಡ ಕೂಡಿಸಿ ಹೇಳಿದರೂ ಒಪ್ಪುತ್ತಾರೆ. 'ಗುಡ್ ಮಾರ್ನಿಂಗ್ ಗುರುದೇವ' ಎಂದರೆ ಸಿಟ್ಟಿಲ್ಲ. 'ಗುಡ್‌ಮಾರ್ನಿಂಗ್ ಸಾರ್' ಎಂದು ಮಾತ್ರ ಹೇಳಬಾರದು. ಕನ್ನಡನಾಡಿನ ಕರುಣಕತೆಯ ಕುರಿತು ಅವರು ಭಾಷಣ ಕೊಡಲು ತೊಡಗಿದರೆಂದರೆ ಕೇಳುವವರ ಕಣ್ಣಲ್ಲಿ ಕಂಬನಿಯು ಕೋಡಿ ಹರಿಯಬೇಕು.

ಹೀಗೆಲ್ಲಾ ತಮ್ಮದೇ ಆದ ಒಂದೊಂದು ಹೊಸ ಹೊಸ ವೈಶಿಷ್ಟ್ಯದಿಂದ

ಕೂಡಿದ ಉಪಾಧ್ಯಾಯರಿರುವ ಆ ಶಾಲೆ ನಿಜವಾಗಿಯೂ ಒಂದು ಸಂತೋಷದ ಕೇಂದ್ರವಾಗಿತ್ತು. ಅಲ್ಲಿಗೆ ಹೋಗಿ ಬರುವುದೆಂದರೆ ಹಳೆಯ ವಿದ್ಯಾರ್ಥಿಗಳಿಗೆಲ್ಲಾ ಹಬ್ಬವಾಗಿತ್ತು!

ರಾಮಣ್ಣ ಪತ್ರನೋಡಿದಾಗ ಹಿಗ್ಗಿದ. ತನ್ನ ಹಿಂದಿನ ಸಾಲೆಯ ವಾರ್ಷಿಕ ಸಮಾರಂಭಕ್ಕೆ ಆಹ್ವಾನ ಪತ್ರಿಕೆಯಾಗಿರಬಹುದೆಂದು ಎಣಿಸಿಕೊಂಡ. ಆದರೆ ಪತ್ರ ಓದುತ್ತ ಹೋದ ಹಾಗೆ ಅವನ ಕೈಯಲ್ಲಿ ನಡುಕ ಉಂಟಾಗುತಿತ್ತು. ಊರಿನ ಜನರ ಪ್ರೀತಿಗೆ ಪಾತ್ರರಾಗಿದ್ದು ಹಲವಾರು ವರ್ಷಗಳಿಂದ ಆ ಶಾಲೆಯಲ್ಲಿ ಮುಖ್ಯೋಪಾಧ್ಯಾಯರಾಗಿ ದುಡಿದ ಶ್ಯಾಮರಾಯರಿಗೆ ಕೆಲಸದಿಂದ ನಿವೃತ್ತಿಯಾಗುತ್ತಿದೆ. ವಿದ್ಯಾರ್ಥಿಗಳಿಗೆ, ಸಹೋದ್ಯೋಗಿಗಳಿಗೆ, ಶಾಲೆಯ ಸಿಬಂದಿಯವರಿಗೆ, ಊರಿನ ಮಹನೀಯರಿಗೆ ಎಲ್ಲರಿಗೂ ಅವರನ್ನು ಬೀಳ್ಕೊಡುವುದಕ್ಕೆ ಅಪಾರ ದುಃಖವಾಗುತ್ತದೆ. ಬೀಳ್ಕೊಡದೆ ವಿಧಿಯಿಲ್ಲ. ಅದರಿಂದ ಅವರನ್ನು ಬೀಳ್ಕೊಡುವಾಗ ಊರಿನವರು ಸತ್ಕಾರಕೂಟವೊಂದನ್ನು ಏರ್ಪಡಿಸಿದ್ದರು. ಅದಕ್ಕೆ ಶ್ಯಾನುಭಾಗ ರಾಮಣ್ಣನಿಗೂ ಆಹ್ವಾನ ಬಂದಿದೆ.

ಪತ್ರ ಬಹಳ ವಿಳಂಬವಾಗಿ ಬಂತು. ಅದೇ ಸಂಜೆ ಸತ್ಕಾರಕೂಟ. ರಾಮಣ್ಣ ತ್ವರೆಯಾಗಿ ಹೊರಟು ಕ್ಲಪ್ತ ಸಮಯದ ಎರಡು ತಾಸುಗಳ ಮೊದಲೇ ಅಲ್ಲಿಗೆ ಮುಟ್ಟಿದ್ದ.

"ಹಲ್ಲೋ...... ರಾಮಣ್ಣ ವೈ ಬೊಯ್.... ಐ ಏಮ್ ವೆರಿ ವೆರಿ ವೆರಿ ಗ್ಲೇಡ್ ಟು ಸೀ ಯು" ಎಂದು ಓಡಿಬಂದು ಶ್ಯಾನುಭಾಗರ ಕೈಕುಲುಕಿದವರು ಶಾಲೆಯ ಡ್ರಿಲ್ ಮಾಸ್ತರರು.

ಸತ್ಕಾರಕೂಟಕ್ಕೆ ಇನ್ನೂ ಎರಡು ತಾಸು ಉಳಿದಿರುವುದರಿಂದ ಡ್ರಿಲ್ ಮಾಸ್ತರರು ಶ್ಯಾನುಭಾಗರನ್ನು ಕಾಫಿಕುಡಿಸುವುದಕ್ಕಾಗಿ ಪಕ್ಕದ ಹೋಟೆಲಿಗೆ ಕರೆದುಕೊಂಡು ಹೋದರು. ಕಾಫಿ ಕುಡಿದೊಡನೆ ರಾಮಣ್ಣ ತಾನು ಹಣ ಕೊಡುವೆನೆಂದು ಎದ್ದಾಗ ಡ್ರಿಲ್ ಮಾಸ್ತರರು ತಡೆದು ನಿಲ್ಲಿಸಿದರು. "ಯು ಸಿಲ್ಲೀ ಹುಡುಗ! ಡೋಂಟ್ ವರಿ. ಈ ಹೋಟೆಲಿಲ್ಲಿನಲ್ಲಿ ನನ್ನ Mathematics (ಲೆಕ್ಕ!)ಇದೆ. ಅವರು ಅದರಲ್ಲಿ ಬರೆಯುತ್ತಾರೆ!" ಎಂದು 'ಎಳೆದುಕೊಂಡರು.

ಕ್ಲಪ್ತ ಸಮಯಕ್ಕೆ ಕಾರ್ಯಕ್ರಮಗಳು ತೊಡಗಿದುವು. ಹಳೆ ವಿದ್ಯಾ

ರ್ಥಿಗಳು, ಹೊಸ ವಿದ್ಯಾರ್ಥಿಗಳು, ಊರ ಮಹನೀಯರು ಇವರಿಂದ ಶಾಲೆಯಲ್ಲಿ ಸ್ಥಳವೇ ಇರಲಿಲ್ಲ. ಒಬ್ಬೊಬ್ಬರೇ ಎದ್ದು ನಿಂತು ಶ್ಯಾಮರಾಯರ ದಕ್ಷ ಆಡಳಿತೆಯಲ್ಲಿ ಶಾಲೆಯಲ್ಲಿ ಉಂಟಾದ ಪ್ರಗತಿಯನ್ನು ಎತ್ತಿ ತೋರಿಸಿ, ಮುಖ್ಯೋಪಾಧ್ಯಾಯರ ಗುಣಗಾನ ಮಾಡಿದರು. ರಾಮಣ್ಣನೂ ತನ್ನ ಶಾಲೆಯ ಹಿಂದಿನ ದಿನಗಳ ನೆನಪನ್ನು ತಂದುಕೊಂಡು ಚಿಕ್ಕದೊಂದು ಭಾಷಣ ವಿತ್ತನು. "ನನ್ನನ್ನು ಮನುಷ್ಯನನ್ನಾಗಿ ಮಾಡಿದುದು ಈ ಶಾಲೆ . . . . . . ಮಗನಂತೆ ನೋಡಿಕೊಂಡವರು ಮುಖ್ಯೋಪಾಧ್ಯಾಯರು" ಎಂದು ಹೇಳುತ್ತಿರುವಾಗ ಶ್ಯಾನುಭಾಗ ರಾಮಣ್ಣನ ಕಣ್ಣಿಂದ ನೀರು ಸುರಿದುದು ಅವನಿಗೆ ಗೊತ್ತೇ ಆಗಿರಲಿಲ್ಲ.

ಶಾಲೆಯ ಸಹೋದ್ಯೋಗಿಗಳ ಸರದಿ ಬಂದಾಗ ಇತಿಹಾಸದ ಉಪಾಧ್ಯಾಯರು ಎದ್ದು ನಿಂತು ಅಶೋಕನ ಸಾಮ್ರಾಜ್ಯಕ್ಕೆ ಶಾಲೆಯನ್ನು ಹೋಲಿಸಿ, ಅಶೋಕನಿಗೆ ಶ್ಯಾಮರಾಯರನ್ನು ಹೋಲಿಸಿ ಮಾತನಾಡಿದರು. ಸೈನ್ಸ್ ಅಧ್ಯಾಪಕರು ಶಾಲೆಯನ್ನು ಜೇನು ನೊಣಗಳ ಗೂಡಿಗೆ ಹೋಲಿಸಿ ಶ್ಯಾಮರಾಯರನ್ನು ರಾಣಿ ನೊಣಕ್ಕೆ ಹೋಲಿಸಿದರು. ಕನ್ನಡ ಪಂಡಿತರು ಯಾವ ರೀತಿ ಮಹಾಶೇಷನು ಭೂಭಾರವನ್ನು ಹೊತ್ತು ನಿಂತಿರುವನೋ ತದ್ರೀತಿಯಲ್ಲಿ ಶ್ಯಾಮರಾಯರು ಶಾಲೆಯ ಹೊಣೆಗಾರಿಕೆಯ ಸರ್ವ ಭಾರವನ್ನೂ ತಾನೊಬ್ಬನೇ ಹೆಗಲುಗೊಟ್ಟು ನಿಂತಿದ್ದರು. ಇನ್ನು ಆ ಮಹಾಶೇಷನೇ ತನ್ನ ಕೆಲಸದಿಂದ ನಿವೃತ್ತಿ ಹೊಂದಿದರೆ ಈ ಭೂಭಾರವನ್ನು ಹೊರುವವರು ಇನ್ನೊಬ್ಬರಿಲ್ಲ ಎಂದು ಉಪಮೆ-ಉತ್ಪ್ರೇಕ್ಷಾಲಂಕಾರಗಳಿಂದ ವರ್ಣಿಸಿ ಕಳವಳ ಸೂಚಿಸಿದರು. ಡ್ರಿಲ್ ಮಾಸ್ತರರಿಗೆ ಇಂಗ್ಲಿಷಿನಲ್ಲಿಯೇ ಮಾತನಾಡಿಬಿಟ್ಟರೆ ಆಗಬಹುದೆಂಬ ಮನಸ್ಸು. ಎಲ್ಲರೂ ಕನ್ನಡದಲ್ಲಿಯೇ ಮಾತನಾಡಿದುದು. ತಾನು ಇಂಗ್ಲಿಷಿನಲ್ಲಿ ಮಾತನಾಡಿದರೆ ತುಂಬಾ ಚೆನ್ನಾಗುವುದೆಂದು ಅವರ ಬಯಕೆ. ಆದರೆ ಸಂಪೂರ್ಣ ಇಂಗ್ಲಿಷಿನಲ್ಲೆ ಮಾತನಾಡುವುದು ಅವರಿಗೆ ಬೇಯದ ಬೇಳೆ. ಡ್ರಿಲ್ ಮಾಸ್ತರರು ಎದ್ದು ನಿಂತಾಗಲೇ ವಿದ್ಯಾರ್ಥಿಗಳು 'ಇಂಗ್ಲಿಷಿನಲ್ಲಿ, ಇಂಗ್ಲಿಷಿನಲ್ಲಿ' ಎಂದು ಬೊಬ್ಬಿಟ್ಟರು.

"ಒಫ್‌ಕೋರ್ಸ್ ಒಫ್‌ಕೋರ್ಸ್. ನಿಮ್ಮ ಡಿಸ್ಸಾಯರ್ ನಾನು ಇಂಗ್ಲಿಷಿನಲ್ಲೆ ಮಾತಾಡಬೇಕೆಂದಿದೆ. ಐ ಏಮ್ ಗ್ಲೇಡ್. ಆದರೆ ಇಷ್ಟೆಲ್ಲಾ ಜನರು ಕನ್ನಡಲ್ಲೇ ಸ್ಪೀಚ್ ಕೊಟ್ಟಿರುವಾಗ ಓನ್ಲಿ ನಾನು ಇಂಗ್ಲಿಷಿನಲ್ಲಿ ಮಾತನಾಡು

ವುದರಿಂದ ಇತರರನ್ನು ಅವಮಾನ ಮಾಡಿದಂತಾಗುವುದಿಲ್ಲವೇ. ಅದು ಗುಡ್ ಮೇನ್ನರ್ಸ್ ಅಲ್ಲ. ವೆರಿ ವೆರಿ ಸೋರ್‍ರಿ." ಎಂದು ಪ್ರಸ್ತಾವನೆ ಮಾಡಿ ಅರ್ಧ ಇಂಗ್ಲಿಷಿನಲ್ಲಿಯೂ ಅರ್ಧಕನ್ನಡದಲ್ಲಿಯೂ ತನ್ನ ಭಾಷಣವನ್ನು ಮುಗಿಸಿದರು. ಭಾಷಣ ಮಾಡಿ ಕುಳಿತೊಡನೆ ತನ್ನ ಅಕ್ಕ ಪಕ್ಕ ಕುಳಿತಿದ್ದವರೊಡನೆ ತನ್ನ ಭಾಷಣ ಹೇಗಾಗಿದೆ ಎಂದು ಕೇಳಿಕೊಂಡರು. "ಒಫ್‌ಕೋರ್ಸ್ ನನಗೆ ಕನ್ನಡದಲ್ಲಿ ಸರಿಯಾಗುವುದಿಲ್ಲ. ಮತ್ತೆ ನಾನು ಪ್ರಿಪೇಯರ್ ಮಾಡಿಯೂ ಇರಲಿಲ್ಲ" ಎಂದು ಸ್ಪಷ್ಟೀಕರಣೆಯನ್ನೂ ಮಾಡಿಕೊಂಡರು.

ಮುಖ್ಯೋಪಾಧ್ಯಾಯರು ದೀರ್ಘ ಭಾಷಣ ಮಾಡಿದರು. ಅನೇಕ ವರ್ಷಗಳಿಂದ ತಾನು ದುಡಿಯುತ್ತಿದ್ದ ಸಾಲೆ, ಚಿರಪರಿಚಿತ ಜನತೆ, ತನ್ನ ಸಹೋದ್ಯೋಗಿಗಳು, ವಿದ್ಯಾರ್ಥಿಗಳು ಇವರೆಲ್ಲರನ್ನೂ ಬೀಳ್ಗೊಟ್ಟು ಅವರಿಂದು ಹೋಗುವ ಸಂದರ್ಭ. ಅವರು ಇವೆಲ್ಲವನ್ನೂ ನೆನಸಿಕೊಂಡು ಭಾಷಣ ಮೀಯುತ್ತಿದ್ದಾಗ ಸಭಿಕರಿಗೆಲ್ಲಾ ಬಹಳ ದುಃಖವಾಗುತಿತ್ತು. ಅವರ ಮುಂದಿನ ಜೀವನದ ಕುರಿತು ತಿಳಿಯಲು ಸಭಿಕರೆಲ್ಲಾ ಕುತೂಹಲಿಗಳಾಗಿದ್ದರು. ಅವರ ಈ ತನಕದ ದುಡಿತದಲ್ಲಿ ಅವರು ಮಾಡಿದುದು ಅಷ್ಟೇನಿಲ್ಲ. ತನ್ನ ಒಬ್ಬನೇ ಒಬ್ಬನಾದ ಮಗನಿಗೆ ಬಿ. ಎ. ತನಕ ಓದಿಸಿದ್ದಾರೆ. ಆತನೀಗ ಕಣ್ಣಾನ್ನೂರಿನಲ್ಲಿ ಕಂಪನಿಯೊಂದರಲ್ಲಿ ಉತ್ತಮ ಕೆಲಸದಲ್ಲಿದ್ದಾನೆ. ಅವನದು ಅಲ್ಲಿ ಚಿಕ್ಕ ಸಂಸಾರ. ತಾನು, ತನ್ನ ಹೆಂಡತಿ, ಮಕ್ಕಳೆರಡು, ಮುಗಿಯಿತು ಅಲ್ಲಿಗೆ. ಊರಿನ ಜನತೆ ಮುಖ್ಯೋಪಾಧ್ಯಾಯರಿಗೆ ಕೆಲಸದಿಂದ ನಿವೃತ್ತಿಯಾಗುವ ಒಂದು ದುರ್ದಿನವು ಬಾರದೇ ಇರಲಿ ಎಂದು ಪ್ರಾರ್ಥಿಸುತ್ತಿದ್ದರೆ ಕಣ್ಣಾನ್ನೂರಿನ ಆ ಚಿಕ್ಕ ಸಂಸಾರ ಮುಖ್ಯೋಪಾಧ್ಯಾಯರಿಗೆ ಕೆಲಸದಿಂದ ನಿವೃತ್ತಿಯಾಗುವ ಮಹಾದಿನವನ್ನು ಇದಿರುನೋಡುತ್ತಲೇ ಇದ್ದರು. ಹೌದು, ಮಗನಿಗೆ ತಂದೆಯೂ ತಾಯಿಯೂ ಇನ್ನು ತನ್ನಲ್ಲಿ ಬಂದು ಸುಖವಾಗಿ ಇರಬೇಕೆಂದು ಬಯಕೆ? ಇನ್ನು ದುಡಿದುದು ಸಾಕು, ಕೆಲಸಕ್ಕೆ ರಾಜಿಕೊಟ್ಟು ಆದಷ್ಟು ಶೀಘ್ರವಾಗಿ ಇಲ್ಲಿಗೆ ಬಂದುಬಿಡಿರೆಂದು ಬಲವಂತಪಡಿಸಿ ಮಗ ಎಷ್ಟು ಪತ್ರ ಬರೆದರೂ ತಂದೆ ಕೇಳುತ್ತಿರಲಿಲ್ಲ. ನಿವೃತ್ತಿಯಾಗುವ ತನಕ ದುಡಿಯುವೆನು, ಅನಂತರ ತಾನೆ ಮಗನ ಮನೆಗೆ ಹೋಗುವ ಯೋಚನೆ ಎಂದು ಹಟಮಾಡಿದ್ದರು. ಅಂತೂ ಈ ಊರಿನವರಿಗೆ ಶ್ಯಾಮರಾಯರು ಹೋಗುವುದೆಂದರೆ ಎಷ್ಟು ದುಃಖವೋ ಅಷ್ಟೇ ಆ ಊರಿನವರಿಗೆ ಇವರು ಬರುವುದು ಸಂತೋಷದ

ಸಂಗತಿಯಾಗಿತ್ತು. ಇನ್ನು ಅವರು ಸಂಪಾದಿಸಿದುದೆಂದರೆ ಒಂದು ಹಿತ್ತಲು ಮನೆ. ಅದನ್ನು ಮಾರಿ ಹೋಗಲು ಮನಸ್ಸಿಲ್ಲ. ಯಾರೋ ಬಾಡಿಗೆಗೆ ಬೇಕೆಂದು ಕೇಳಿದರಂತೆ. ಅವರಿಗೆ ಮನೆ ಹಿತ್ತಲು ಕೊಟ್ಟು ಡ್ರಿಲ್ ಮಾಸ್ತರರ ಮೂಲಕ ತಿಂಗಳು ತಿಂಗಳು ಸರಿಯಾಗಿ ಬಾಡಿಗೆ ಹಣ ವಸೂಲಿ ಮಾಡಿ ಕಳುಹಿಸುವ ವ್ಯವಸ್ಥೆ ಮಾಡಿಕೊಂಡಿದ್ದಾರೆ. ಇನ್ನೇನು ಮೂರು ದಿನಗಳಲ್ಲಿ ಶ್ಯಾಮರಾಯರು ಈ ಊರಿನ ಹೆಚ್ಚಿನ ಸಂಬಂಧವನ್ನು ಕಳೆದುಕೊಂಡು ಕಣ್ಣಾನ್ನೂರಿನಲ್ಲಿರುವ ಮಗನ ಮನೆಗೆ ಹೋಗಲಿದ್ದಾರೆ.

ಭಾಷಣಗಳೆಲ್ಲವೂ ಮುಗಿದ ಅನಂತರ ನೆರೆದವರು ಒಬ್ಬೊಬ್ಬರಾಗಿ ವೈಯುಕ್ತಿಕವಾಗಿ ಅವರಿಗೆ ಸುಖವನ್ನು ಕೋರಿದರು. ಶ್ಯಾಮರಾಯರು ಎಲ್ಲರಿಗೂ ತಮ್ಮ ಹೊಸ ವಿಳಾಸವನ್ನು ಕೊಟ್ಟರು. ರಾಮಣ್ಣನೂ ವಿಳಾಸವನ್ನು ತೆಗೆದುಕೊಂಡನು.

---

## 14

ಬಿಡುವು ದೊರೆತಾಗಲೆಲ್ಲಾ ನಾಗಿ ಸುಮ್ಮನಿರುವುದಿಲ್ಲ. ಆಕೆಗೆ ಏನಾದರೂ ಮಾಡುತ್ತಲೇ ಇರಬೇಕು. ಏನೂ ಇಲ್ಲದಿರಲು ಆ ಮನೆಯವರನ್ನು ಕೂಡಿಸಿ ಹರಟೆ ಹೊಡೆಯುತ್ತಿರಬೇಕು. ಹರಟೆ ಹೊಡೆಯಲು ಯಾರೂ ದೊರೆಯದಿದ್ದರೆ ಪೆಟ್ಟಿಗೆಯ ಬಾಗಿಲು ತೆರೆದು, ಸೂಜಿದಾರ ಹಿಡಿದು ಬಟ್ಟೆ ಚಿಂದಿಗಳಲ್ಲಿ ಚಿತ್ರ ಬರೆದು, ಏನಾದರೂ ಹೊಲಿಯುತ್ತಿರಬೇಕು. ಹಾಗೆ ಹೊಲಿದ ಒಂದು ಕರವಸ್ತ್ರವನ್ನು ತನ್ನ ಪ್ರೇಮದ ಪ್ರತಿರೂಪವಾಗಿ ರಾಮಣ್ಣನ ಕೋಟಿನ ಕಿಸೆಯಲ್ಲಿ ತುರುಕಿಸಿದ್ದಳು. ಹದಿಮೂರು ದಿನಗಳ ಅವಿಶ್ರಾಂತ ಶ್ರಮದಿಂದ ತಯಾರಿಸಿದ ಒಂದು ಬೀಸಣಿಗೆಯನ್ನು ಆಕೆ ರಾಮಣ್ಣನಿಗೆ ತೋರಿಸಿದಾಗ ಆತನು ತನ್ನರಸಿಯ ಜಾಣ್ಮೆಗೆ ತಲೆದೂಗಿಕೊಂಡ. ಒಮ್ಮೆ ಮಾತುಕತೆಯ ನಡುವೆ ನಾಗಿ ಬಾಯಿ ಹಾಕಿ—

"ನಮ್ಮ ಧನಿಗಳು ಬಹಳ ಒಳ್ಳೆಯವರು . . . . ." ನಾಗಿ ಹೇಳಿದಳು.

"ಏತರಿಂದ?"

"ಏತರಿಂದಲೇ? ಛೆ. ಚಲೋ ಮನುಷ್ಯರಪ್ಪಾ. ಅವರ ದಯೆಯಿಲ್ಲದಿದ್ದರೆ ನಿಮ್ಮ ಪಾಡೇನಾಗುತಿತ್ತು ಗೊತ್ತೇ? ಹೊಲೆಯ ಬಟ್ಯ, ಹೊಲದ ತಿಮ್ಮರೊಡನೆ ಈಗಲೂ ಬಯಲಲ್ಲೆ ಉಳಿಯುತಿದ್ದೀರಿ. ಅವರಲ್ಲದಿರುತಿದ್ದರೆ

ನಿಮಗೆ ಶ್ಯಾನುಭಾಗ ಪದವಿಯೆಲ್ಲಿ? ನೀವು ಶ್ಯಾನುಭಾಗರಾಗದಿರುತ್ತಿದ್ದರೆ ನಾನು ನಿಮ್ಮನ್ನು ವರಿಸಲಿತ್ತೆ?"

ಈ ಕೊನೆಯ ಮಾತು ತುಸು ಕಠಿಣವಾಗಿತ್ತು. ಹೆಣ್ಣುಗಳೆಲ್ಲಾ ಬಲು ಗಡಸುಗಾತಿಯರೆಂದು ರಾಮಣ್ಣ ತನ್ನಲ್ಲೇ ನೊಂದುಕೊಂಡನು. ತನ್ನ ವಿನಯತೆಯ ದುರುಪಯೋಗ ನಾಗಿ ಮಾಡುತ್ತಿರುವಳೋ ಎಂದು ಶಂಕಿಸಿಕೊಂಡನು. ಧನಿಯವರ ಮೇಲೆ ಧೈನ್ಯತೆ, ಪೂಜ್ಯಭಾವ ಇರಬಾರದೆಂದಿಲ್ಲ. ಆದರೆ ಈ ರೀತಿಯ ಅಭಿಮಾನ ಈಕೆಗೇಕೆ ಎಂಬ ಅನುಮಾನವೂ ಅಂಕುರಿಸಿಕೊಂಡಿತು. ಆದರೆ ನಾಗಿ ಹಾಗೆಂದೂ ಎಣಿಸಿದವಳಲ್ಲ. ಈಗಲೀಗ ಶ್ಯಾನುಭಾಗರಿಗೆ ಕಚೇರಿಯ ಕೆಲಸ ಹಿರಿದಾದುದರಿಂದ ಮನೆಗೆ ಬಂದು ಪತ್ನಿಯೊಡನೆ ಸರಸ ಸಲ್ಲಾಪವಾಡಲು ಎಡೆಯೇ ದೊರೆಯಲಿಲ್ಲ. ಇದರಿಂದ ಬಹಳ ನೊಂದುಕೊಂಡ ನಾಗಿ ಪುಣ್ಯವಶಾತ್ ಗಂಡನೊಡನೆ ಮಾತಾಡುವಾಗ ಏನಾದರೂ ಒಂದಿಷ್ಟು ಪ್ರಣಯ ಕಲಹವನ್ನು ಹಚ್ಚಿ ಗಂಡನೊಡನೆ ಜಗಳವಾಡುತ್ತಾ ಆನಂದವನ್ನು ಕಂಡುಕೊಳ್ಳುತಿದ್ದಳು. ಅದಕ್ಕಾಗಿಯೇ "ನೀವು ಶ್ಯಾನುಭಾಗರಾಗದಿರುತಿದ್ದರೆ ನಿಮ್ಮನ್ನು ನಾನು ವರಿಸುತಿದ್ದೆನೇ?" ಎಂದು ವಿನೋದಕ್ಕಾಗಿ ಆಕೆ ಹೇಳಿದುದು ಮಾತ್ರ.

ಅಕ್ಕ-ತಂಗಿಯರ ಹಿಂದಿನ ಮನಕ್ಲೇಶ ಅಣ್ಣ-ತಮ್ಮಂದಿರನ್ನು ಬೇರೆ ಬೇರೆ ಮನೆಯಲ್ಲಿರುವಂತೆ ಮಾಡಿತು. ಮನೆ ಬೇರೆಯಾಗದೆ ವಿಧಿಯಿರಲಿಲ್ಲ. ಕಮಲನ ಪಿತೂರಿ ಪರಮಾವಧಿಗೆ ಮುಟ್ಟಿತ್ತು. ರಾಮಣ್ಣ ಹಿಂದಿನ ಮನೆಯ ಬಳಿಯಲ್ಲೇ ಇನ್ನೊಂದು ಮನೆ ಗೊತ್ತು ಹಚ್ಚಿಕೊಂಡ. ಅಣ್ಣನ ಅಪ್ಪಣೆ ಪಡೆದುಕೊಂಡ. ಅಗಲುವಿಕೆ ಜೀವನದಲ್ಲಿ ಅನಿವಾರ್ಯವಾದುದಲ್ಲವೆ? ಹುಟ್ಟಿದಂದಿನಿಂದ ಈ ತನಕ ಒಡನಿದ್ದು ಈಗ ಬೇರಾಗುವ ಪರಿಸ್ಥಿತಿ ಇಬ್ಬರ ಕಂಠವನ್ನೂ ಬಿಗಿಹಿಡಿಯಿತು. ಮಾಧವನು ಬೇರೆ ಮನೆಬೇಡ, ಒಟ್ಟಿಗೆಯೇ ಇರೋಣ"ವೆಂದು ಇನ್ನೂ ತಮ್ಮನೊಡನೆ ಹೇಳಬಹುದಿತ್ತು. ಆದರೆ ಹಿಂದಿನ ರಾತ್ರೆ ಕಮಲ ನನ್ನ ಕಿವಿಯಲ್ಲಿ ಹೇಳಿದ ಮಾತಿನ ಜ್ಞಾಪಕವಾಯಿತು. "ನಾಗಿಯೂ ನಾನು ಖಂಡಿತವಾಗಿಯೂ ಒಂದೇ ಮನೆಯಲ್ಲಿರಲಾರೆವು. ಹಾಗೆ ನೀವು ಇನ್ನೂ ಬಯಸುವಿರಾದರೆ ನಾನು ನನ್ನ ಪ್ರಾಣವನ್ನು . . . . ." ಎಂದು ಕಮಲ ಹಾಕಿಕೊಂಡ ಭೀಷ್ಮ ಪ್ರತಿಜ್ಞೆಯ ಅರಿವಾಯಿತು.

ತಾಯಿ ನೀಲಿ ರಾಮನ ಮನೆಗೇ ಹೋದಳು. 'ನನಗೆ ಎರಡು

ಮಕ್ಕಳೂ ಒಂದೇ ರೀತಿ. ಆದರೆ ಮಾಧವ ಕಮಲರಿಗೆ ಮಕ್ಕಳಿಲ್ಲ. ಅವರಿಬ್ಬರೇ. ರಾಮು–ನಾಗಿಯರಿಗೆ ಚಿಕ್ಕ ಮಗುವಿದೆ. ಮಗುವಿನ ಪೋಷಣೆಯ ಕುರಿತು ಅವರಿಗೇನೂ ತಿಳಿಯುವುದಿಲ್ಲ. ಆದುದರಿಂದ ಮಗುವಿಗಾಗಿ ನಾನು ಅಲ್ಲಿಗೇ ಹೋಗಬೇಕು" ಎಂದು ನೀಲಿ ಹೊಸ ಮನೆಗೆ ನಡೆದಳು.

ಮಾಧವ ತಮ್ಮನ ಮನೆಗೆ ಆಗಾಗ ಹೋಗಿಬರುತಿದ್ದನು. ಕಮಲು ಮಾತ್ರ ಅವರ ಮನೆಗೆ ಹೋದುದೇ ಇಲ್ಲ. ಎಲ್ಲಿಯಾದರೂ ಸಮಯ ದೊರೆತರೆ, ಕೆಲಸಗಳನ್ನೆಲ್ಲಾ ಬೇಗ ಬೇಗ ತೀರಿಸಿ ಬಟ್ಟೆ ಹಿಡಿದುಕೊಂಡು ಊರ ಕೆರೆಗೆ ಹೋಗುವುದು; ಅಲ್ಲಿ ದಿನಾಲೂ ಭೇಟಿಯಾಗುವ ಬ್ರಹಸ್ಪತಿ ಭಾಗೀರಥಿ ಅಮ್ಮನವರ ಉಪದೇಶಕ್ಕೆ ಕಿವಿಗೊಡುವುದು ಅವಳ ನಿತ್ಯದ ಕೆಲಸವಾಯಿತು. ದಾಮೋದರ ತಂದ ಮದ್ದನ್ನು ಸೇವಿಸಿದ ಅನಂತರ, ಭಾಗೀರಥಿಯ ಆಶ್ವಾಸನೆ ದೊರೆತ ಮೇಲೆ ಆಕೆಗೆ ತಾನು ಇನ್ನು ಕೆಲವೇ ದಿನಗಳಲ್ಲಿ ಒಂದು ಕೂಸನ್ನು ಹಡೆಯಲಿರುವೆನೆಂಬ ಮಹಾದಾಸೆ ಮೂಡುತ್ತಲಿತ್ತು.

---

## 15

ಭಾಗೀರಥಿ–ಕಮಲನವರ ಪ್ರಚಾರಖಾತೆ ಕೆಲಸಕ್ಕೆ ತೊಡಗಿತು. ಶ್ಯಾನುಭಾಗರ ಹೆಂಡತಿ ನಾಗಿಯ ಮೇಲೆ ಒಂದಲ್ಲ, ಎರಡಲ್ಲ, ನೂರು ಅಪವಾದಗಳು ಕೇಳತೊಡಗಿದುವು. ದಿನಹೋದಂತೆ ಇದು ಊರಲ್ಲೆಲ್ಲಾ ಪ್ರತಿಧ್ವನಿಸಿಕೊಂಡಿತು. ಸಾಹುಕಾರ್ ವೆಂಕಟೇಶ ಕಮ್ತಿಯವರ ಮನೆಯಲ್ಲಂತೂ ಇದರ ಮುಖ್ಯ ಕಚೇರಿ. ಮಾರಪ್ಪ ಶೆಟ್ರ ಮನೆಯಲ್ಲಿ, ನಲ್ಲೂರಾಯರ ಅಂಗಳದಲ್ಲಿ, ಮಮ್ಮದೆಯ ಅಂಗಡಿಯಲ್ಲಿ ಎಲ್ಲಾ ಜನರು ಈ ಕುರಿತೇ ಚರ್ಚಿಸತೊಡಗಿದರು.

ನೀರಿಗೆ ಬರುವ ಹೆಂಗುಸರು ನೀಲಿಯನ್ನೇ ಕೇಳಿದರು.

"ಏನಮ್ಮಾ ನೀಲಿ, ನಿನ್ನ ಸಣ್ಣ ಸೊಸೆಯ ಕುರಿತು ಊರಲ್ಲೆಲ್ಲಾ ಏನೆಲ್ಲಾ ಕೇಳಿಬರುತ್ತಿದೆ?"

ಈ ಮಾತುಗಳು ನೀಲಿಯ ಕರುಳು ಕತ್ತರಿಸುತಿದ್ದುವು. ಆದರೂ ಅದನ್ನು ಸೈರಿಸಿಕೊಂಡೇ ಆಕೆ ಮನೆಗೆ ಹಿಂತಿರುಗುತಿದ್ದಳು. ಎಂತಹ ಸಾಧು ಹೆಂಗುಸು ನೀಲಿ! ಈ ವಾರ್ತೆಯನ್ನು ಮನೆಯಲ್ಲಿ ಮಗನಿಗಾಗಲೀ ಸೊಸೆ

ಗಾಗಲಿ ತಿಳಿಸದೆ ಆಕೆ ತನ್ನಲ್ಲೆ ಗುಟ್ಟಾಗಿರಿಸಿದ್ದಳು. ತನ್ನ ಸೊಸೆಯ ನಡತೆಯ ಕುರಿತು ಆಕೆಗೆ ಸಂಶಯವೇನೂ ಇರಲಿಲ್ಲ. ತನ್ನ ಕೆಲಸಗಳನ್ನು ಮಾಡುತ್ತಾ ದಿನವಿಡೀ ನಾಗಿ ಮನೆಯಲ್ಲೇ ಇರುತ್ತಾಳೆ. ಬೀಡಿನ ಧನಿ, ರಾಮಣ್ಣ ಶ್ಯಾನುಭಾಗರಾದಂದಿನಿಂದ ಒಮ್ಮೆಯಾದರೂ ತಮ್ಮ ಮನೆಗೆ ಬಂದಿರಲಾರರೆಂದು ನೀಲಿಗೇ ಗೊತ್ತು. ಹೊರತು ತಾನಾಗಲೀ ನಾಗಿಯಾಗಲೀ ಬೀಡಿಗೆ ಕಾಲಿರಿಸಿದವರಲ್ಲ. ಮತ್ತೇಕೆ ಸುಳ್ಳು ಸುದ್ದಿಗಳ ಕುರಿತು ನೀಲಿ ಶಂಕಿಸಬೇಕು?

ಏನೋ, ಧನಿಯವರ ಹೆಂಡತಿಗೂ ನಾಗಿಗೂ ಬಹಳ ಸ್ನೇಹವಿತ್ತು. ಏನಾದರೂ ಒಳ್ಳೆಯ ವಸ್ತು ನಾಗಿಗೆ ದೊರೆತರೆ ಅದನ್ನು ಧನಿಯ ಹೆಂಡತಿಗೆ ಕಳುಹಿಸುವುದುಂಟು. ಹಾಗೆಯೇ ಧನಿಯವರ ಹೆಂಡತಿಯೂ ನಾಗಿಗೆ ಪ್ರತಿಯಾಗಿ ಏನಾದರೂ ಕಳುಹಿಸಿಕೊಡುವುದುಂಟು.

ಮಮ್ಮದೆಯ ಹೆಂಡತಿ ಬೀಪಾತುಮ್ಮನ ಕಿವಿಗೂ ಈ ಸುದ್ದಿ ಮುಟ್ಟದೆ ಇರಲಿಲ್ಲ. ಆದರೆ ಆಕೆ ಇವೆಲ್ಲಾ ಸುಳ್ಳು ಸುದ್ದಿಗಳು. ಆ ಚಿನ್ನದಂತಿರುವ ಹುಡುಗಿಯ ಮೇಲೆ, ಕಮ್ತಿಯ ಹೆಂಡತಿ ಭಾಗೀರಥಿ ಮತ್ತು ಮಾಧವನ ಹೆಂಡತಿ ಕಮಲು ಮಾಡಿದ ಅಪಪ್ರಚಾರ. ಈಗ ಹತ್ತು ದಿನಗಳಿಂದ ಅವರಿಬ್ಬರೂ ಕೆರೆಯಲ್ಲಿ ದಿನನಿತ್ಯ ಎರಡು ಮೂರು ತಾಸು ಧೀರ್ಘ ಮಾತಾಡುತ್ತಿರುತ್ತಾರೆ. ಕಮ್ತಿಯ ಹೆಸರು ಸಿಕ್ಕಿದರೆ ಸಾಕು ಮಮ್ಮದೆ ಬಿಡುವ ಮಗನಲ್ಲ.

"ಎಲ್ಲಾ ಸುಳ್ಳುಸುದ್ದಿಗಳು ...... ಅಂತಹ ಅನ್ಯಾಯದ ಸುದ್ದಿ ಹುಟ್ಟಿಸಿದವರು ಈ ಊರಿನಲ್ಲಿ ದೇವರ ಸತ್ಯ ಇರುವುದಾದರೆ ಹಾಳಾಗಿ ಹೋಗದೆ ಇರಲಾರರು" ಎಂದು ಮಮ್ಮದೆ ಶಾಪವೀಯುತಿದ್ದ.

ಸುದ್ದಿ ಬೆಂಕಿಯಂತೆ ಹಬ್ಬಿಕೊಂಡಿತು. ಅದು ಮೆಲ್ಲಗೆ ಶ್ಯಾನುಭಾಗರ ಕಿವಿಗೂ ಮುಟ್ಟದೆ ಇರಲಿಲ್ಲ. ಆದರೆ ಅವರು ಕೇಳಿದರೂ ಕೇಳಿಸದವರಂತೆ ನಡೆದರು. ಅವರು ಪೇಟೆಗೆ ಹೋಗುವಾಗ ಕಮ್ತಿಯ ಹಿತ್ತಲು ದಾಟಿ ಹೋಗಬೇಕಿತ್ತು. ಕಮ್ತಿಯ ಹೆಂಡತಿ ಭಾಗೀರಥಿ ಮಾರಪ್ಪ ಶೆಟ್ರ ಹೆಂಡತಿ ಅಂತಕ್ಕೆ ಶೆಡ್ತಿಯವರೊಡನೆ ಮಾತುಕತೆಯಾಡುತಿದ್ದಳು. ಅಂತಕ್ಕೆ ಶೆಡ್ತಿಯವರೇನೂ ಚಿಲ್ಲರೆ ಹೆಂಗಸಲ್ಲ. ತನ್ನ ಅತ್ತೆಗೆ ಬೆತ್ತಹಿಡಿದ ಮಹಾ ಸಾಹಸಿ ಹೆಂಗಸು ಆಕೆ. ಭಾಗೀರಥಿಗೆ ಒಳ್ಳೆ ಜತೆ. ಶ್ಯಾನುಭಾಗರು ಬರುತಿದ್ದುದನ್ನು ಕಂಡೋ ಕಾಣದೆಯೋ ಭಾಗೀರಥಿ ತಾನು ಹೇಳಬೇಕೆಂದು ಬಯಸಿದುದನ್ನು ಹೇಳಿಯೇ ಬಿಟ್ಟಳು.

"ಏನಮ್ಮಾ . . . . ಧನಿಯವರ ತಾಳಕ್ಕೆ ಸರಿಯಾಗಿ ಕುಣಿಯುವ ಹೆಂಗಸರಿದ್ದರೆ ಅವರ ಗಂಡಂದಿರಿಗೆಲ್ಲಾ ಶ್ಯಾನುಭಾಗರ ಪದವಿಯೂ ದೊರೆಯುತ್ತದೆ. ಅದಕ್ಕಿಂತ ಹೆಚ್ಚು ದೊರೆಯುತ್ತದೆ."

ಶ್ಯಾನುಭಾಗರು ಕಿವಿಮುಚ್ಚಿಕೊಂಡರು. ಎಂತಹ ಕರ್ಕಶ ಮಾತದು? ಇಂತಹ ಅಪಪ್ರಚಾರಗಳು ಯಾಕೆ ಮತ್ತು ಹೇಗೆ ಹುಟ್ಟಿಕೊಂಡವೆಂದು ಅವರು ತಿಳಿಯದಾದರು. ತನ್ನಾಕೆಯ ನಡತೆ ಅವರಿಗೆ ಸರಿಯಾಗಿ ತಿಳಿದೇ ಇತ್ತು. ಆಕೆ ಎಂದಿಗೂ ಅಂತಹ ಕೆಟ್ಟ ನಡತೆಯ ದುಷ್ಟೆಯಲ್ಲವೆಂಬುದು ಅವರಿಗೆ ನಂಬಿಕೆಯಿತ್ತು. ಆದರೆ ಗಾಳಿ ಬಾರದೆ ಎಲೆಗಳೇಕೆ ಅಲ್ಲಾಡಿದುವೆಂದು ಅವರು ತಿಳಿಯದಾದರು.

ಕತ್ತಲಾಗುವಾಗ ಮನೆಗೆ ಬಂದು ನಿರುತ್ಸಾಹದಿಂದ ಮಲಗಿಕೊಂಡರು. ಜೀವನದಲ್ಲೇ ರಾಮಣ್ಣನಿಗೆ ಒಂದು ತೆರನಾದ ಜಿಗುಪ್ಸೆ ಹುಟ್ಟಿಕೊಂಡಿತು. ಮಗುವನ್ನು ಮಾತನಾಡಿಸಲಿಲ್ಲ. ನೀಲಿಯೊಡನೆ ಏನೂ ನುಡಿಯಲಿಲ್ಲ. ನಾಗಿಯ ಕಡೆಗೆ ಕಣ್ಣೆತ್ತಲಿಲ್ಲ.

---

## 16

ಮೂರು ದಿನಗಳಿಂದ ರಾಮಣ್ಣ ಬೀಡಿಗೂ ಕಾಲಿರಿಸಿರಲಿಲ್ಲ. ದೇಹ ಪ್ರಕೃತಿ ನೆಟ್ಟಗಿಲ್ಲವೆಂದು ಧನಿಗಳಿಗೆ ಓಲೆಯೊಂದು ಬರೆದು ಕಳುಸಿಹಿದ್ದನು. ಬೆಳಗಾದೊಡನೆ ಬೈರಾಗಿಯಂತೆ ಪೇಟೆಗೆ ಹೋಗುವುದು. ಕತ್ತಲಾಗುವಾಗ ಮನೆಗೆ ಹಿಂತಿರುಗುವುದು. ಮೂರು ದಿನಗಳಿಂದಲೂ ಇದೇ ಆತನ ನಿತ್ಯ ಕೆಲಸವಾಯಿತು. ಊರಲ್ಲಿ ಹುಟ್ಟಿದ ಸುದ್ದಿ ಸತ್ಯವಾಗಿರಬಹುದೇ ಎಂಬ ಸಂದೇಹವೊಮ್ಮೆ ಮೂಡುವುದು. ಛಿ! ಎಂದಿಗೂ ಹಾಗಾಗಿರದು, ಎಂಬ ಹೊಸ ಚೇತನವಿನ್ನೊಮ್ಮೆ. ಮತ್ತರೆತಾಸಿನಲ್ಲಿ ಏನೂ ಕಾರಣವಿಲ್ಲದೆ ಸುಮ್ಮನೆ ಈ ಸುದ್ದಿ ಯಾಕೆ ಹುಟ್ಟಿರಬಹುದೆಂಬ ಯೋಚನೆ. ಈ ಸಮಸ್ಯೆಗಳಿಗೆ ಬಲಿಬಿದ್ದ ರಾಮಣ್ಣ ಮುಂದಿನ ದಾರಿ ಕಾಣದಾದ. ಅಂತೂ ಸಂಗತಿ ಸತ್ಯವಾಗಿದ್ದರೆ ಶೋಧ ಮಾಡಿಯೇ ಮುಗಿಸಬೇಕೆಂಬ ನಿರ್ಧಾರವಿತ್ತು ಆತನಲ್ಲಿ.

ಸಂಶಯವೊಂದಿದ್ದರೆ ಸಾಕು. ಅದನ್ನು ಪುಷ್ಟೀಕರಿಸುವ ಎಷ್ಟೋ ಪುರಾವೆಗಳೂ ಸನ್ನಿವೇಶಗಳೂ ತಾವಾಗಿಯೇ ದೊರೆತುಕೊಳ್ಳುವುವು.

ಹದಿಮೂರು ದಿನಗಳ ಅವಿಶ್ರಾಂತ ಶ್ರಮದಿಂದ ನಾಗಿ ಹೆಣೆದ ಬೀಸಣಿಗೆಯನ್ನು ಇತ್ತೀಚೆಗೆ ಬೀಡಿನ ಧನಿಯವರ ಕೈಯಲ್ಲಿ ತಾನು ಕಂಡಿದ್ದ ನೆನಪು ಬಂತು ರಾಮಣ್ಣನಿಗೆ. ಬೀಸಣಿಗೆಯ ಕೊನೆಯಂಚಿನಲ್ಲಿ ಕೆಂಪು ನೂಲಿನಿಂದ ನಾಗಿಯ ಹೆಸರು ಹೆಣೆದುದನ್ನು ಆತ ಕಂಡಿದ್ದ. ಆದರೆ ಆಗ ಕೆಲಸಗಳ ಮಧ್ಯೆ ರಾಮಣ್ಣನಿಗೆ ಇದರ ಕುರಿತು ಸಂಶಯವೇ ಆಗಲಿಲ್ಲ. ರಾಮಣ್ಣನ ಸಂಶಯ ಪಿಶಾಚಿ ಈಗ ಬಲಿಷ್ಠವಾಗತೊಡಗಿತು. ಕೆಲವು ದಿನಗಳ ಹಿಂದೆ ಧನಿಯವರು ಬನಾರಸ್ ಸೀರೆಗಳನ್ನು ಮಾರಿಕೊಂಡು ಬಂದ ಬ್ಯಾರಿಗಳಿಂದ ತೆಗೆದಿದ್ದರು. ಸೀರೆಗಳನ್ನು ಆರಿಸಲು ರಾಮಣ್ಣನೂ ಅಂದು ಸೇರಿದ್ದ.

ಅವುಗಳಲ್ಲಿ ಒಂದು ಸೀರೆ ನಾಗಿಯ ಪೆಟ್ಟಿಗೆಯಲ್ಲಿದ್ದುದನ್ನು ರಾಮಣ್ಣ ಕಂಡು ಅವಾಕ್ಕಾದನು. ಕೋಪದಿಂದ ಒಮ್ಮೆಲೇ ಕಿಡಿಕಿಡಿಯಾಗಿ ನಾಗಿಯ ತಲೆಜುಟ್ಟು ಹಿಡಿದು ಕೇಳಿದ "ಎಲಾ, ಈ ಸೀರೆ ನಿನಗೆ ಹೇಗೆ ದೊರೆಯಿತೇ?"

ಮದುವೆಯಾದಂದಿನಿಂದ ಈ ತನಕವೂ ಎಂದಾದರೂ ಕಣ್ಣು ಕೆಂಪಗೆ ಮಾಡಿ ಗದರಿಸದ ಗಂಡ ಇಂದೇಕೆ ಹೀಗೆ ಮಾಡುತ್ತಿರುವನೆಂದು ತಿಳಿಯದಾದಳು ನಾಗಿ. ಅವಳ ಮನದ ಬೇಗುದಿ ಹೆಚ್ಚಾದುದರಿಂದ ಗಂಡನ ಪ್ರಶ್ನೆಗೆ ಉತ್ತರ ಕೊಡುವಷ್ಟು ಚೇತನವೂ ಅವಳಲ್ಲಿ ಇಲ್ಲದೆ ಹೋಯಿತು.

ಮೌನವೇ ಸಮ್ಮತಿ! ಸಾಕು, ರಾಮಣ್ಣನಿಗೀಗ ಸರಿಯಾದ ನಿದರ್ಶನ ದೊರೆಯಿತಲ್ಲವೇ? ಊರಿನಲ್ಲಿ ಉಂಟಾದ ಸುದ್ದಿ ಸತ್ಯವಾಯಿತು. ಬೀಡಿನ ಧನಿಯವರಿಗೂ ನಾಗಿಗೂ ಈ ರೀತಿ ಪರಸ್ಪರ ವ್ಯವಹಾರ ಬಹುದಿನಗಳಿಂದ ನಡೆಯುತ್ತಿದ್ದಿರಬಹುದೆಂದು ಮನಗಂಡು ಉನ್ಮತ್ತನಾಗಿ ಮನೆಯಿಂದಿಳಿದು ನಡೆದ. ಇಲ್ಲವಾದರೆ ನಾಗಿ ಹೆಣೆದ ಬೀಸಣಿಗೆ ಬೀಡಿನ ಧನಿಯವರ ಕೈಯಲ್ಲಿಯೂ, ಧನಿ ತೆಗೆದ ಸೀರೆ ನಾಗಿಯ ಪೆಟ್ಟಿಗೆಯಲ್ಲಿಯೂ ಸೇರಲು ಯಾರಾದರೂ ಇಂದ್ರಜಾಲ ಮಾಡಿರಬಹುದೇ?

ಸತ್ಯ ಸಂಗತಿ ಹೀಗಿತ್ತು. ಬೀಡಿನ ಧನಿಯವರ ಹೆಂಡತಿ ಚಂದ್ರಮತಿಗೆ ನಾಗಿಯ ಮೇಲೆ ತುಂಬಾ ಅನುರಾಗ. ಮೇಲಾಗಿ ಅವರು ಒಂದೇ ಊರಿನವರು. ನಾಗಿಗೆ ಏನಾದರೂ ಉತ್ತಮ ವಸ್ತು ದೊರೆತರೆ ಅದು ಚಂದ್ರಮತಿಗೆ ಮೀಸಲು. ಅಂತೆಯೇ ಚಂದ್ರಮತಿಗೆ ಏನಾದರೂ ದೊರೆತರೆ ಅದು ನಾಗಿಗೆ ಮೀಸಲು.

ತಾನು ಅವಿಶ್ರಾಂತ ಶ್ರಮದಿಂದ ತಯಾರಿಸಿದ ಬೀಸಣಿಗೆಯನ್ನು ನಾಗಿ

ಧನಿಯವರ ಹೆಂಡತಿಗೆ ಕಳುಹಿಸಿದ್ದಳು. ಅದರಲ್ಲಿ ಕೆಂಪು ನೂಲಿನಿಂದ ತನ್ನ ಹೆಸರನ್ನು ನಾಗಿ ಅಂದವಾಗಿ ಹೆಣೆದಿದ್ದಳು. ಚಂದ್ರಮತಿ ಅದನ್ನು ಕಂಡು ಹಿರಿಹಿಗ್ಗಿದರು. ನಲ್ಮೆಯಿಂದ ಅದನ್ನು ತನ್ನ ಗಂಡನಿಗೆ ಅರ್ಪಿಸಿದರು. ಮುಂದೆ ಧನಿಯವರು ಒಂದೇ ತೆರನಾದ ಎರಡು ಬೆನಾರಸ್ ಸೀರೆಗಳನ್ನು ತೆಗೆದು ಕೊಟ್ಟಾಗ ಅವುಗಳಲ್ಲಿ ಒಂದನ್ನು ನಾಗಿಗೆ ಚಂದ್ರಮತಿ ಉಚಿತವಾಗಿ ಕಳುಹಿಸಿ ಕೊಟ್ಟಿದ್ದರು. ಇವೆಲ್ಲಾ ಧನಿ ಮತ್ತು ಶ್ಯಾನುಭಾಗರಿಬ್ಬರ ಹೆಂಡಂದಿರೊಳಗೆ ನಡೆದುಹೋದ ಸಂಗತಿಗಳಲ್ಲದೆ ಇನ್ನೇನೂ ಆಗಿರಲಿಲ್ಲ.

ನೀಲಿ ಮಗನ ದುರವಸ್ಥೆಯನ್ನು ಕಂಡು ಕೊರಗಿದಳು. ನಾಗಿ ನಿರಪರಾಧಿನಿಯೆಂದು ಮಗನಿಗೆ ಎಷ್ಟು ಹೇಳಿಕೊಂಡರೂ ಅದು ಕೋಣನ ಮುಂದೆ ಊದಿದ ಕಿನ್ನರಿಯಾಯಿತು.

ರಾಮಣ್ಣ ಪೇಟೆಗೆ ಹೋಗಿದ್ದವನು ಇನ್ನೂ ಬಂದಿರಲಿಲ್ಲ. ಬೀಡಿಗೆ ಮೂರು ದಿನಗಳಿಂದಲೂ ರಾಮಣ್ಣ ಬಾರದಿದ್ದುದನ್ನು ಕಂಡು ಧನಿಯವರು ತವಕಗೊಂಡರು. ಮೇಲಾಗಿ ದೇಹಪ್ರಕೃತಿ ನೆಟ್ಟಗಿಲ್ಲವೆಂದು ರಾಮಣ್ಣನ ಓಲೆಯೂ ಬಂದಿತ್ತು. ಬೀಡಿನ ಅನೇಕ ಕೆಲಸಗಳು ಹಾಗೆಯೇ ಉಳಿದಿದ್ದುವು. ಒಂದು ಸಂಜೆ ಧನಿಯವರೇ ರಾಮಣ್ಣನ ದೇಹಸ್ಥಿತಿಯನ್ನು ಕಂಡು ಬರೋಣವೆಂದು ಒಬ್ಬಂಟಿಗರಾಗಿ ಹೊರಟರು. ಶ್ಯಾನುಭಾಗರು ಆ ಮನೆಯಲ್ಲಿ ಒಕ್ಕಲಾದ ಅನಂತರ ಧನಿಯವರು ಅಲ್ಲಿಗೆ ಬಂದುದು ಇದೇ ಮೊತ್ತಮೊದಲ ಬಾರಿ.

ಧನಿಯವರು ಅಪರೂಪವಾಗಿ ಮನೆಗೆ ಬಂದುದನ್ನು ನೋಡಿ ನೀಲಿ ಮತ್ತು ನಾಗಿಯರು ಚೆನ್ನಾಗಿ ಉಪಚರಿಸಿದರು. ಒಳಗಿದ್ದ ಕುರ್ಚಿಯನ್ನು ಹೊರಗೆಳೆದು ನಾಗಿ ಧನಿಯವರನ್ನು ಕುಳ್ಳಿರಿಸಿದಳು. ಬಾಳೆಯ ಗೊನೆಯಲ್ಲಿ ಉಳಿದಿದ್ದ ಹತ್ತಾರು ಹಣ್ಣುಗಳನ್ನು ಬೆಳ್ಳಿಯ ತಟ್ಟೆಯಲ್ಲಿ ತಂದಿರಿಸಿದಳು.

ಪೇಟೆಯಿಂದ ದಾಮೋದರನೊಡನೆ ಮನೆಗೆ ಹಿಂದಿರುಗುತಿದ್ದ ಕಮ್ಮಿ ಕತ್ತೆತ್ತಿ ಶ್ಯಾನುಭಾಗರ ಮನೆಯಲ್ಲಿ ಬೀಡಿನ ಧನಿ ಕುಳಿತಿದ್ದುದನ್ನು ಕಂಡು ಇತರರಿಗೆ ಕಾಣಿಸಿದ. ಮಾರಪ್ಪ ಶೆಟ್ರು ಕೋವಿ ಹಿಡಿದುಕೊಂಡು ಶಿಕಾರಿಗೆ ಹೋದವರು ಆ ದಾರಿಯಾಗಿ ಬರುತಿದ್ದವರು ನಾಗಿ ಧನಿಯವರೊಡನೆ ಮಾತನಾಡುತ್ತಾ ನಿಂತಿದ್ದುದನ್ನು ನೋಡಿ, ಶಿಕಾರಿಯನ್ನು ಮರೆತು ನೆಟ್ಟಗೆ ಹೋಗಿ ತನ್ನ ಹೆಂಡತಿಗೆ ವರದಿಯಿತ್ತರು.

"ಶ್ಯಾನುಭಾಗರಿಲ್ಲವೇನಮ್ಮಾ. . . . . . " ಧನಿಯವರು ನಾಗಿ ಮತ್ತು ನೀಲಿಯರೊಡನೆ ವಿಚಾರಿಸಿದರು. "ಮೂರು ದಿನಗಳಿಂದಲೂ ಅವರು ಬೀಡಿಗೆ ಬರಲಿಲ್ಲ. ದೇಹಪ್ರಕೃತಿ ನೆಟ್ಟಗಿಲ್ಲವೆಂದು ಓಲೆ ಬರೆದು ತಿಳಿಸಿದ್ದಾರೆ. ಅದ ಕ್ಕಾಗಿ ನೋಡಿಬಿಡೋಣವೆಂದು ನಾನೇ ಬಂದೆ. ಈಗ ಆರೋಗ್ಯವಾಗಿದ್ದಾ ರಲ್ಲಾ? ಅವರು ಬಂದಾಗ ನಾನು ಬಂದುದನ್ನು ತಿಳಿಸಿಬಿಡಿರಿ. ಹೊತ್ತಾ ಯಿತು, ನಾನಿನ್ನು ಹೋಗಿಬಿಡುತ್ತೇನೆ" ಎಂದು ಕುರ್ಚಿಯಿಂದ ಏಳುವಷ್ಟರಲ್ಲಿ ಶ್ಯಾನುಭಾಗ ರಾಮಣ್ಣನವರ ಸವಾರಿಯೂ ಅಲ್ಲಿಗೆ ಬಂತು. ಎದ್ದ ಧನಿಯ ವರು ಪುನಃ ಕುಳಿತುಕೊಂಡರು. ನಾಗಿ ಮಗುವನ್ನು ಎತ್ತಿ, ಕಂಭಕ್ಕೊರಗಿ ಬಳಿಯಲ್ಲೇ ಕುಳಿತುಕೊಂಡಿದ್ದಳು.

ಶ್ಯಾನುಭಾಗರ ಮುಖ ಕಪ್ಪಿಟ್ಟುಕೊಂಡಿತು. ಬೀಸಣಿಗೆಯ ನಿದರ್ಶನ, ಸೀರೆಯ ನಿದರ್ಶನ ಈ ತನಕ ದೊರೆತ ರಾಮಣ್ಣನಿಗೆ ಇದು ಮೂರನೆಯ ನಿದರ್ಶನವಾಗಿ ತೀರಿತು. ಧನಿಗಳು ಬಂದುದೇಕೆ? ಏನು ಸಮಾಚಾರ? ಎಂದು ಏನನ್ನೂ ಅರಿತುಕೊಳ್ಳುವ ಸಹನೆ ರಾಮಣ್ಣನಿಗಿರಲಿಲ್ಲ. ಆತನ ತಲೆಯೇ ಕೆಟ್ಟುಹೋಗಿತ್ತು.

ರಾಮಣ್ಣನ ಕೋಪದ ಜ್ವಾಲೆ ಬಳಿಯಿದ್ದವರನ್ನೆಲ್ಲಾ ಸುಡುವಂತಿತ್ತು. ಕುಳಿತಿದ್ದ ಧನಿಯನ್ನು ಎತ್ತಿ ಬಲಾತ್ಕಾರದಿಂದ ಎದ್ದು ನಿಲ್ಲಿಸಿದ. ಯಾರಿಗೂ ಏನೂ ತಿಳಿಯದಾಯಿತು. ಧನಿಯವರಿಗೆ ಅತ್ಯಂತ ಖೇದವಾಯಿತು. ನಾಗಿ 'ಅಯ್ಯೋ ಇವರಿಗೇನು ಬಂತು . . . . ನನ್ನ ವಿಧಿಯೇ' ಎಂದು ಎದೆ ಬಡಿದು ಕೊಂಡಳು. ಮಗು ಕಿರ‍್ರೆಂದು ಅಳಹತ್ತಿತು. ನೀಲಿಗೆ ಇನ್ನೇನಾಗುವುದೋ ಎಂದು ಹೆದರಿ ಮಾತೇ ಹೊರಡುತ್ತಿರಲಿಲ್ಲ.

"ಏನಾಯಿತಪ್ಪಾ ರಾಮಣ್ಣಾ ನಿನಗೆ. ಹೇಳು . . . ಹೀಗೇಕಾಯಿತು . . . " ಎಂದು ಧನಿಗಳು ಹೇಳುತಿದ್ದಂತೆ ರಾಮಣ್ಣ ಎರಡೂ ಕೈಗಳಿಂದ ಧನಿಯ ದೇಹವನ್ನು ಕೋಪದಿಂದ ಕುಲುಕಿದನು.

"ಚಾಂಡಾಲಾ . . . ಭಂಡವಲದ ದುರಹಂಕಾರದಿಂದ ಇಂತಹ ಹೀನ ಕೆಲಸಕ್ಕಿಳಿದೆಯಾ? ನನ್ನ ವಿನಯತೆಯ ದುರುಪಯೋಗ ಮಾಡಿದೆಯಾ? ನಿನ್ನಲ್ಲಿ ನೌಕರಿಮಾಡಿ ನಿನ್ನ ಉಪ್ಪನ್ನ ಉಂಡ ಒಂದು ಋಣವಲ್ಲವಾಗಿದ್ದರೆ ನಿನ್ನನ್ನು ಇಲ್ಲೇ ಕೊನೆಯುಸಿರೆಳೆವಂತೆ ಮಾಡುತಿದ್ದೆ. ನಿನ್ನ ನೌಕರಿಯನ್ನು ಇಂದೇ ಬಿಟ್ಟಿರುವೆನು. ನಿನ್ನ—ನನ್ನೊಳಗಿನ ಎಲ್ಲಾ ಸಂಬಂಧವನ್ನೂ ಕಳೆದು

ಕೊಂಡಿರುವೆನು. ನನ್ನ ಹೆಂಡತಿ ಹೆಣೆದ ಬೀಸಣಿಗೆ ನಿನ್ನ ಕೈಸೇರಿರುವುದೂ —ನೀನು ತೆಗೆದ ಸೀರೆ ಈ ದುಷ್ಟೆಯ ಪೆಟ್ಟಿಗೆ ಸೇರಿರುವುದೂ ನಾನು ತಿಳಿದಿಲ್ಲ ವೆಂದು ಭಾವಿಸಿರುವಿಯಾ?" ಎಂದು ಕಣ್ಣು ಕೆರಳಿಸುತ್ತಿರುವಾಗಲೇ ಧನಿಯು ವರು ಅವಸರವಸರವಾಗಿ ರಾಮಣ್ಣನ ಮನೆಬಿಟ್ಟರು. ರಾಮಣ್ಣನ ಮೊದಲಿನ ಮಾತುಗಳನ್ನು ಕೇಳಿದಾಗ "ಪಾಪ ಈತನಿಗೆ ಏನೋ ತಲೆಕೆಟ್ಟಿರಬಹುದೆ"ಂದು ಮಾತ್ರ ಎಣಿಸಿಕೊಂಡರು. ಆದರೆ ನಾಗಿ ಹೆಣೆದ ಬೀಸಣಿಗೆ, ತಾನು ತೆಗೆದ ಸೀರೆ, ಇವುಗಳ ಮಾತು ಬಂದಾಗ ಇದರಲ್ಲೇನೋ ಯಾರದೋ ಕಾಣದ ಕೈಯ್ವಾಟವಿದೆಯೆಂದೂ, ಇದನ್ನು ತನ್ನ ಹೆಂಡತಿಗೆ ತಿಳಿಸಿ ಅವಳ ಮೂಲಕವೇ ಈ ಸಮಸ್ಯೆಗೆ ಪರಿಹಾರ ದೊರೆಯಬಹುದೆಂದೂ ಎಣಿಸಿಕೊಂಡರು. ಸಮಸ್ಯೆ ಬೇಗವಾಯಿತು! ಪರಿಹಾರ ತಡವಾಯಿತು! ಧನಿಯವರ ಹೆಂಡತಿ ಇದರೆಡೆ ತವರುಮನೆಗೆ ಹೋಗಿದ್ದವರು ಹಿಂತಿರುಗಲು ಇನ್ನೂ ಮೂರು ದಿನ ಬೇಕಿತ್ತು. ನಾಗಿ ಹೆಣೆದ ಬೀಸಣಿಗೆ ಬೀಡಿನ ಧನಿಯವರ ಕೈಗೆ ಹೇಗೆ ದೊರೆಯಿತೆಂದೂ, ಬೀಡಿನ ಧನಿ ತೆಗೆದ ಸೀರೆ ನಾಗಿಯ ಪೆಟ್ಟಿಗೆಯಲ್ಲಿ ಹೇಗೆ ಬಂತೆಂದೂ ಚಂದ್ರ ಮತಿಯೇ ಬಂದು ವಿವರಿಸಿದ್ದರೆ ರಾಮಣ್ಣನ ಕೆಟ್ಟ ತಲೆ ಸರಿದಾರಿಗೆ ಬಂದು ಸುಳ್ಳು ಸುದ್ದಿ ಉಂಟುಮಾಡಿದವರಿಗೆ ತಕ್ಕ ಪ್ರಾಯಶ್ಚಿತ್ತ ಆತನೇ ಮಾಡು ತಿದ್ದ. ಆದರೆ ವಿಧಿಯ ಆಟ ಇನ್ನೊಂದು ತೆರನಾಗಿತ್ತು. ನಾಗಿಗಾಗಲೀ ನೀಲಿಗಾಗಲೀ ಈ ಕುರಿತು ಯಾವ ವಿವರಣೆಯನ್ನು ಕೊಡಲೂ ಆತ ಸಂದ ರ್ಭವೇ ನೀಡಲಿಲ್ಲ. ಅವರನ್ನು ಕಂಡಕ್ಷಣವೇ ಬುಸುಗುಟ್ಟುವ ಸರ್ಪದಂತೆ ಹೆಡೆಯೆತ್ತಿ ನಿಲ್ಲುತ್ತಿದ್ದ. ಅವರು ಅವನ ಕಣ್ಣೆದುರಿನಿಂದ ಸ್ವಲ್ಪ ಸರಿದರೆ ಆತಗೆ ತುಸು ಸಮಾಧಾನವಾಗುತ್ತಿದೆ.

ನಾಗಿ ತುಸು ಧೈರ್ಯ ತೆಗೆದುಕೊಂಡಳು. ದುಃಖಾತಿರೇಕದಿಂದ ಗಂಡನ ಬಳಿ ಬಂದಳು.

ಹೀಗೇಕೆ ಮಾಡುತ್ತಿರುವಿರಿ? ನನ್ನಿಂದ ಏನಾದರೂ ತಪ್ಪು ನಡೆದಿದೆಯೇ? ಅದಕ್ಕೆ ತಕ್ಕ ಸಮಾಧಾನವನ್ನು ನಾನು ಕೊಡಬಲ್ಲೆ. ಹೇಳಿರಿ. ನೀವು ಹೇಳದೆ ಹೋದರೆ ಈ ನನ್ನ ಹೊಟ್ಟೆಯಿಂದ ಹೊರಬಂದ ಕರುಳಿನ (ಮಗು) ಆಣೆಯಿದೆ . . . . ಹೇಳಿರಿ" ನಾಗಿ ಕಂಬನಿಗರೆಯುತ್ತಾ ಕೇಳಿದಳು.

ರಾಮಣ್ಣನಲ್ಲಿ ವಿವೇಕವಿಲ್ಲ; ಸಹನೆ ಮೊದಲೇ ಇಲ್ಲ. ನಾಗಿಯ ಕತ್ತು ಹಿಡಿದು ಹೊರದೂಡಿ ಬಿಟ್ಟ. ಆಕೆ ಕಂಬದ ಮೇಲೆ ಢಿಕ್ಕಿ ಹೊಡೆದು ಬಿದ್ದಳು. ಆಕೆಯ ಕಂಕುಳಲ್ಲಿದ್ದ ಮಗು ಇನ್ನೊಂದು ಕಡೆ ಬಿದ್ದು ಅಳತೊಡಗಿತು. ನೀಲಿ ಇದೇನು ಪ್ರಮಾದವಾಯಿತೆಂದು ಮಗನನ್ನೇ ನೋಡುತ್ತಾ ನಿಂತಿದ್ದಳು.

## 17

ಕಮ್ಮಿತ್ತಿಯ ಸಾಲ ತೀರಿದ ಅನಂತರ ತಿಮ್ಮನಿಗೆ ಉಳಿದ ಬೇಸರವೆಂದರೆ ತನ್ನ ಮಗ ನಿಂಗನ ವಿಚಾರ ಒಂದೆ. ಎಲ್ಲಿಯಾದರೂ ಹೋಗಿರಲಿ, ಸಾಯುವ ಮುನ್ನ ತನ್ನ ಮಗನನ್ನೊಮ್ಮೆ ನೋಡಿದರೆ ಸಾಕೆಂಬುದೇ ಆತನ ಕೊನೆಯ ಸಮಾಧಾನವಾಗಿತ್ತು.

ಹೇಗಾದರೂ ಆ ಕಮ್ಮಿತ್ತಿಯ ಬ್ರಹ್ಮಾಸ್ತ್ರದಿಂದ ಪಾರಾದುದೇ ದೊಡ್ಡದೆಂದು ತಿಮ್ಮ ಹೇಳಿಕೊಳ್ಳುತ್ತಿದ್ದಾನೆ. ಮಮ್ಮದೆಗೂ ತಿಮ್ಮನಿಗೂ ಈಗ ಯಾವ ಸಂಬಂಧವೂ ಇಲ್ಲ. ಮಮ್ಮದೆ ದೂರದಿಂದ ಬರುವುದನ್ನು ಕಂಡರೆ ತಿಮ್ಮ ಆ ದಾರಿಯನ್ನೇ ಬಿಟ್ಟು ಇನ್ನೊಂದು ದಾರಿ ಹಿಡಿಯುತ್ತಾನೆ. ತನ್ನ ಮಗನಿಗೆ ತಪ್ಪು ಬುದ್ಧಿ ಕಲಿಸಿ, ಅವನನ್ನು ವೈಗಳ್ಳನಾಗಿ ಮಾಡಿದುದು ಮಮ್ಮದೆಯೆಂದೇ ಅವನ ಎಣಿಕೆ.

"ಯಾಕೆ ಈ ತಿಮ್ಮಪ್ಪ ನನ್ನ ಮೇಲೆ ಮುನಿದುಕೊಂಡಿದ್ದಾನೋ ನನಗೆ ತಿಳಿಯದು. ನಾನೇನೂ ಆತನಿಗೆ ಮಾಡಿಲ್ಲ" ಎಂದು ಮಮ್ಮದೆ ತನ್ನ ಅಂಗಡಿಗೆ ಬಂದವರಲ್ಲೆಲ್ಲಾ ನುಡಿಯುತಿದ್ದ. ತಿಮ್ಮ ಮತ್ತು ತನ್ನೊಳಗಿರುವ ಕೋಪವನ್ನೆಲ್ಲಾ ಸರಿಗೊಳಿಸಿ ಮೈತ್ರಿ ಮಾಡುವುದಕ್ಕಾಗಿ ಸರಾಫ ಸುಬ್ರಾಯ ಆಚಾರಿಗಳಲ್ಲಿ ಕೇಳಿಕೊಂಡಂತೆ ಅವರು ತಿಮ್ಮನ ಬಳಿಗೆ ಹೋಗಿ ಮಾಡಿದ ಕೃಷ್ಣ ಸಂಧಾನವೂ ವಿಫಲವಾಯಿತು. ಸಂಧಾನ ಮುರಿದುಹೋಯಿತು!

ತಿಮ್ಮನ ಗುಡಿಸಲ ಮುಂದಿನ ತೆಂಗಿನಮರದಲ್ಲಿ ಕಾಯಿ ಕೊಯ್ಯಲು ವೇಳೆಯಾಗಿತ್ತು. ಬೆಳಿಗ್ಗೆ ಹತ್ತು ಗಂಟೆಯಾಗುವಾಗ ತಿಮ್ಮ ತೆಂಗಿನ ಮರಕ್ಕೆ ಹತ್ತಿದ. ಸುಮಾರು ಹತ್ತು ಕಾಯಿಗಳನ್ನು ಕೊಯ್ದು ಕೆಳಗೆಬಿಸುಟು ತಿಮ್ಮನೇಕೋ ಆಗಸವನ್ನೊಮ್ಮೆ ನೋಡಿ ನಿಟ್ಟುಸಿರಿಟ್ಟನು. ಜೀವನವಿಡೀ ಕಷ್ಟ ಕಾರ್ಪಣ್ಯಗಳೇ? ಒಂದು ದಿನವಾದರೂ ಸುಖದ ಅನ್ನ ಉಣ್ಣುವ ಸುದಿನ ತಿಮ್ಮನಿಗೆ ಬಹಳ ದೂರವಿತ್ತು.

ತಿಮ್ಮನನ್ನು ಯಾರೋ ಅಂತರಿಕ್ಷದಿಂದ ಮಾತನಾಡಿಸುತಿದ್ದರು. "ನಿಮಗೆ ನನ್ನ ಗುರುತು ಸಿಗಲಿಲ್ಲವೇ? ನೋಡಿ ಆ ನಾಗರ ಹಾವು ನನ್ನನ್ನು ಮತ್ತು ನಿಮ್ಮನ್ನು ಎಷ್ಟು ದೂರ ಮಾಡಿಬಿಟ್ಟಿತು!"

ತಿಮ್ಮನು ತಾನು ಉಟ್ಟಿದ್ದ ವಸ್ತ್ರದ ಅಂಚಿನಿಂದಲೇ ಕಣ್ಣೊರಸಿಕೊಂಡ. ಮತ್ತೆ ಕಾಯಿಯನ್ನು ಕೀಳುವುದಕ್ಕಾಗಿ ಕೈ ಎತ್ತಿದ.

"ನಿನ್ನೊಡನೆ ಇನ್ನು ಬಾಳಲಾರೆ. ಈ ಹುಡುಗನಿಗೆ ಈ ರೀತಿಯಾಗಿ ಹೊಡೆದಿಯಲ್ಲ? ಅಂದು ನನ್ನೊಡನೆ ಹೇಳಿದುದೇನು? ಮಗೂ..... ನಡೆ ಈ ಪಾಪಿಯ ಬಳಿಯಿಂದ..."

ತಿಮ್ಮ ಕಿತ್ತ ತೆಂಗಿನಕಾಯಿ ಮರದ ಮೇಲಿನಿಂದ ಉದುರಿ ಕೆಳಗೆ ಬೀಳುವ ಸದ್ದು ಕೇಳುತ್ತಲೇ ಇತ್ತು.

ಒಂದು.....

ಎರಡು......

ಮೂರು!

ಅಂಗಡಿಯಿಂದ ಮಮ್ಮದೆ ಹುಚ್ಚನಂತೆ ಓಡುತಿದ್ದ. ತಿಮ್ಮನು ತೆಂಗಿನ ಮರದಿಂದ ಕೆಳಗೆ ಬಿದ್ದುದನ್ನು ಮಮ್ಮದೆಗೆ ಯಾರೋ ಹೇಳಿದರು. ಎಲ್ಲರೂ ಅಲ್ಲಿಗೆ ಓಡಿಬಂದರು. ಮಮ್ಮದೆ ತಿಮ್ಮನನ್ನು ಎತ್ತಿ ಕುಳ್ಳಿರಿಸುವಾಗ ತಿಮ್ಮನಿಗೆ ಪ್ರಜ್ಞೆಯೇ ಇರಲಿಲ್ಲ. ಸರಾಫ ಸುಬ್ರಾಯ ಆಚಾರಿಗಳ ಗಾಡಿಯನ್ನು ಬಾಡಿಗೆಗೆ ಪಡೆದು ಮಮ್ಮದೆ ತಿಮ್ಮನನ್ನು ಆಸ್ಪತ್ರೆಗೆ ಸಾಗಿಸಿಯೇ ಬಿಟ್ಟ.

ಈ ಸಂದರ್ಭದಲ್ಲಿ ತನ್ನ ಮನೆ—ಅಂಗಡಿಗಳನ್ನೇ ಮಮ್ಮದೆ ಮರೆತಿದ್ದ. ಎಂತಹ ಪವಿತ್ರ ಮನಸ್ಸು ಆತನದು!

ತಿಮ್ಮ ನಿಧಾನವಾಗಿ ಗುಣಹೊಂದುತ್ತಿದ್ದ. ಒಂದು ಕಾಲು ಸರಿಯಾಗುವ ಕುರಿತು ಡಾಕ್ಟರರು ಸಂದೇಹ ತಾಳಿದ್ದರು. ಪ್ರಾಣವಾದರೂ ಉಳಿಯಿತಲ್ಲ ಎಂದು ಮಮ್ಮದೆ ಸಂತಸಪಟ್ಟ. ತಿಮ್ಮ ಮಮ್ಮದೆಯನ್ನು ಅಪ್ಪಿಹಿಡಿದು ಆತನ ಉಪಕಾರ ಸ್ಮರಣೆಮಾಡಿದ. ಆದರೆ ತಿಮ್ಮನಿಗೆ ಇನ್ನೊಂದು ಯೋಚನೆ ಪೀಡಿಸುತಿತ್ತು. ಯಾವ ಆಪತ್ಕಾಲದಲ್ಲಿಯೂ ತಾನು ಸ್ವತಹಾ ಹೋಗಿ ಸಹಾಯ ಕೇಳದಿದ್ದರೂ ತಾವೇ ಬಂದು ತನಗೆ ನೆರವಾಗುತಿದ್ದ ಶ್ಯಾನುಭಾಗ ರಾಮಣ್ಣನೇಕೆ ಒಮ್ಮೆಯಾದರೂ ತನ್ನನ್ನು ನೋಡಲು ಬರಲಿಲ್ಲ ಎಂಬುದೇ ತಿಮ್ಮನ ಯೋಚನೆ.

---

## 18

ತಿಮ್ಮನು ತೆಂಗಿನ ಮರದಿಂದ ಬಿದ್ದ ದಿನವೇ ಶ್ಯಾನುಭಾಗ ರಾಮಣ್ಣನ ಬಾಳಿನಲ್ಲಿ ಒಂದು ಮಹತ್ತರವಾದ ಬದಲಾವಣೆಯೇ ಉಂಟಾಗಿತ್ತು. ರಾಮಣ್ಣನ ದೇಹಪ್ರಕೃತಿ ಸುಧಾರಿಸುವುದೋ ಎಂದು ನೋಡಲು ಬಂದಿದ್ದ

ನಿರಪರಾಧಿ ಧನಿಯವರ ಮೈಗೆ ಕೈಹಾಕಿ ಅವಮಾನ ಪಡಿಸಿದುದು ಅದೇ ದಿನ. ತನ್ನ ಕೈಹಿಡಿದು ಈ ತನಕ ಜೀವನಮಾಡಿದ ಸಾಧುಪತ್ನಿಯನ್ನು ಕತ್ತು ಹಿಡಿದು ಕಂಬದ ಮೇಲೆ ಎಸೆದು ದಂಡಿಸಿದುದೂ ಅದೇ ದಿನ.

ನಾಗಿ ಕಂಬನಿಯನ್ನೊರಸಿಕೊಂಡು, ಕಂಬಕ್ಕೊರಗಿ ನಿಂತಲ್ಲೆ ನಿಂತಿದ್ದಳು.

ಮುದುಕಿ ನೀಲಿ ತನ್ನ ಮಗನಿಗೇನು ಮಂಕು ತಗಲಿತೆಂದು ದೇವರನ್ನೇ ಪ್ರಾರ್ಥಿಸಿ ಕುಳಿತಿದ್ದಳು.

ನಾಲ್ಕು ವರ್ಷದ ಅವರ ಕೂಸು ಸುಶೀಲಾ ಯಾವುದನ್ನೂ ಅರಿಯದೆ ಅಳುತ್ತಾ ನೆಲದಮೇಲೆ ಹೊರಳಾಡುತ್ತಿದ್ದಳು.

ಆ ದಿನ ಎಲ್ಲರೂ ಬರೀ ಹೊಟ್ಟೆಯಲ್ಲೇ ಮಲಗಿಕೊಂಡರು. ಮಾಡಿಟ್ಟ ಅನ್ನ, ಒಲೆಯ ಮೇಲೆಯೇ ಉಳಿದು ಕೊಂಡಿತು. ಮಗುವಿನ ಹಾಲು ಬಡ ವಾಗಿದ್ದ ಬೆಕ್ಕಿನ ಬಾಯಿಗೆ ಸೇರಿತು.

ಎರಡು ಮೂರು ತಾಸು ಯಾರಿಗೂ ನಿದ್ದೆ ಹತ್ತಿರಲಿಲ್ಲ. ಅನಂತರ ತನ್ನಂತೆಯೇ ರೆಪ್ಪೆ ಮುಚ್ಚಿಕೊಂಡು ರಾಮಣ್ಣನನ್ನು ಉಳಿದು ಉಳಿದ ಎಲ್ಲರೂ ನಿದ್ದೆ ಹತ್ತಿಸಿಕೊಂಡು ಗೊರಕೆ ಹೊಡೆಯಲು ತೊಡಗಿದರು.

ರಾಮಣ್ಣ ಸದ್ದಾಗದಂತೆ, ಯಾರಿಗೂ ತಿಳಿಯದಂತೆ, ಹಾಸಿಗೆಯ ಮೇಲೆ ಎದ್ದು ಕುಳಿತುಕೊಂಡ. ಆತನ ಮನಸ್ಸಿನಲ್ಲಿ ಕೊಂಚವೂ ನೆಮ್ಮದಿ ಇರಲಿಲ್ಲ. ಅಸಹನೀಯವಾದ ಬೇಗುದಿಯೊಂದು ಆತನ ಹೃದಯವನ್ನು ಕೊರೆಯುತ್ತಲಿತ್ತು. ಹಿಂದಿನ ದಿನಗಳ ಅನೇಕ ನೆನಪುಗಳು ಅವನಿಗಾಗ ತೊಡಗಿದುವು. ಆ ನೆನಪುಗಳೆಲ್ಲಾ ಮತ್ತರೆತಾಸಿನಲ್ಲಿ ಮರೆತು ಮಾಯವಾ ಗುತಿದ್ದುವು. ಆದರೆ ಅವನ ಜೀವನ ಪರ್ಯಂತ ಮರೆಯಲಾರದ ಒಂದೆರಡು ಸನ್ನಿವೇಶಗಳು ಆತನನ್ನು ಇನ್ನೂ ಇನ್ನೂ ಬಾಧಿಸತೊಡಗಿದುವು. ಒಮ್ಮೆ ಕಣ್ಣುಬಿಟ್ಟರೆ ಧನಿ ತಂದ ಸೀರೆ ನಾಗಿಯ ಪೆಟ್ಟಿಗೆಯಲ್ಲಿ ಹೇಗೆ ಬಂತು? ನಾಗಿ ತಯಾರಿಸಿದ ಬೀಸಣಿಗೆ ಧನಿಯವರ ಕೈಗೆ ಹೇಗೆ ಸೇರಿತು? ಎಂಬ ಎರಡು ಪ್ರಶ್ನೆಗಳಿಗೆ ಆತನಿಗೆ ಸಮರ್ಪಕವಾದ ಉತ್ತರಬೇಕಾಗಿತ್ತು. ತನಗೆ ಬೀಡಿನಲ್ಲಿ ನೌಕರಿಯಾದ ಅನಂತರ ಒಂದು ದಿನವಾದರೂ ತನ್ನ ಮನೆಗೆ ಬಾರದ ಧನಿ ಈ ದಿನವೇಕೆ ಬಂದರು? ಅದರಲ್ಲಿಯೂ ತನ್ನ ಗೈರುಹಾಜರಿಯಲ್ಲಿ? ಈ ತೆರ ನಾಗಿ ತಾನಿಲ್ಲದ ವೇಳೆಯನ್ನು ಕಂಡು, ಅಥವಾ ತನ್ನನ್ನು ದೂರದ ಕೆಲಸಕ್ಕೆ ಅಟ್ಟಿ ಅವರು ಎಷ್ಟು ಬಾರಿ ಬಂದುಹೋಗಿದ್ದರೋ? ನಾಗಿಯ ಈ ವರ್ತನೆಗೆ

ತಾಯಿ ನೀಲಿಯೂ ಸಹಕರಿಸುತಿದ್ದಳೋ? ಸಾಹುಕಾರ್ ಕಮ್ತಿಯವರ ಹೆಂಡತಿ ಭಾಗೀರಥಿ ಆ ದಿನ ಹೇಳುತ್ತಿದ್ದ ಮಾತು ನಡೆದುದೇ ಆಗಿರಬಹುದೇ?

ಕಮಲು ಮತ್ತು ಭಾಗೀರಥಿ ನಡೆಸಿದ ಒಂದೊಂದೇ ಪಿತೂರಿಯ ಪರಿಣಾಮವನ್ನು ನೆನಸಿದಂತೆಲ್ಲಾ ರಾಮಣ್ಣನ ಸಂದೇಹ ಪ್ರಬಲವಾಗುತ್ತಲೇ ಇತ್ತು. ಕಟ್ಟಕಡೆಗೆ ಆತನೊಂದು ನಿರ್ಧಾರಕ್ಕೆ ಬಂದುಬಿಟ್ಟನು. ನಿರ್ಧಾರ ಖಂಡಿತವೇ ಆಯಿತು.

ತನ್ನ ನೌಕರಿಯಲ್ಲಿ ಆತ ಈ ತನಕ ಮನೆಯ ಖರ್ಚು ಇತ್ಯಾದಿ ಕಳೆದು ಸುಮಾರು ನಾಲ್ಕು ನೂರು ರೂಪಾಯಿ ವರೆಗೆ ಉಳಿಸಿದ್ದನು. ಪೆಟ್ಟಿಗೆಯ ಬೀಗ ತೆಗೆದು ರಾಮಣ್ಣ ಹಣ ಎಣಿಸಿಕೊಂಡನು. ಅನಂತರ ಲೇಖನಿ ಹಿಡಿದು ಒಂದು ಕಾಗದದಲ್ಲಿ ಏನೇನೋ ಬರೆಯತೊಡಗಿದನು.

ಚಿಮಿಣಿಯ ಅಸ್ಪಷ್ಟವಾದ ಬೆಳಕಿನಲ್ಲಿ ಏನೇನೋ ಕಾಲು ತಾಸಿನಲ್ಲಿ ಬರೆದು ಮುಗಿಸಿದನು. ನೀಲಿಗೆ ಬಹಳ ಕಷ್ಟಪಟ್ಟರೆ ಓದಲು ಬರುತ್ತಿತ್ತು. ರಾಮಣ್ಣ ಬರೆದುದು ತನ್ನ ತಾಯಿಗೆ ಪತ್ರ. ತನ್ನ ಉಳಿಕೆಯ ನಾಲ್ಕು ನೂರು ರೂಪಾಯಿಗಳಲ್ಲಿ ಎರಡು ನೂರನ್ನು ಪ್ರತ್ಯೇಕ ತೆಗೆದು ಪತ್ರದೊಂದಿಗೆ ಹಗ್ಗದ ಮೇಲೆ ತೂಗುತಿದ್ದ ತಾಯಿಯ ಸೀರೆಯ ಸೆರಗಿನ ಮೇಲೆ ಜಾಗೃತೆಯಾಗಿ ಕಟ್ಟುತಿದ್ದಾಗ ದೂರದಲ್ಲಿ ಮಲಗಿ ನಿದ್ರಿಸುತ್ತಿದ್ದ ತಾಯಿಯ ಮುಖ ಕಂಡಿತು. ರಾಮಣ್ಣ ಉಕ್ಕಿ ಬರುವ ದುಃಖವನ್ನು ತಡೆದು ಹೆಜ್ಜೆ ಇಟ್ಟ. ಅದರ ಮುಂದೆಯೇ ನಾಗಿ ಮಲಗಿದ್ದುದನ್ನು ಕಂಡೂ ಕಣ್ಣು ಮುಚ್ಚಿಕೊಂಡೇ ಮುನ್ನಡೆದ. ಮುಂದೆ ಕಂಡ ಜೀವ ಆತನ ವೇಗವನ್ನು ಒಂದರೆಕ್ಷಣವಾದರೂ ತಡೆದು ನಿಲ್ಲಿಸದೆ ಇರಲಿಲ್ಲ. ನಾಲ್ಕು ವರ್ಷದ ತನ್ನ ಮುದ್ದು ಹುಡುಗಿ ಸುಸೀಲಾ ಮಲಗಿ ನಿದ್ದೆಹೋಗಿದ್ದಳು. ರಾಮಣ್ಣ ನೆಟ್ಟ ದೃಷ್ಟಿಯಿಂದ ಮಗುವಿನ ಮುಖವನ್ನು ಎವೆಯಿಕ್ಕದೆ ನೋಡಿದ. ಏನೂ ಅರಿಯದ ಆ ಮಗು ಆತನಿಗೆ ಏನೋ ಹೇಳುವಂತೆ ಭಾಸವಾಗುತಿತ್ತು. ಆಕೆಯನ್ನೊಮ್ಮೆ ಎತ್ತಿ ಹೆಗಲ ಮೇಲೆ ತೂಗಿ ಜೋಗುಳ ಹಾಡಬೇಕೆಂದಾಯಿತು. ಆ ಮುದ್ದು ಮೊಗವನ್ನು ಅಕ್ಕರೆಯಿಂದ ಎತ್ತಿ ಮುತ್ತಿಡಬೇಕೆಂದು ತೋರಿತು. ಮೂರು ದಿನಗಳ ಹಿಂದೆ ತನಗೆ ಹೊಸತೊಂದು ಅಂಗಿ ಹೊಲಿಸಿ ತರಬೇಕೆಂದು ಆ ಮಗು ರಾಮಣ್ಣನನ್ನು ಕಾಡಿತ್ತು. ಮರುದಿನ ತಂದು ಕೊಡುವೆನೆಂದು ವಚನವಿತ್ತರೂ ರಾಮಣ್ಣನಿಗೆ ತರಲು ಕೊಡುವೆನೆಂದು ವಚನವಿತ್ತರೂ

ರಾಮಣ್ಣನಿಗೆ ತರಲು ಅನುಕೂಲವಾಗದುದರಿಂದ ಮಗು ಸಿಟ್ಟಿಗೆದ್ದು ಹೊಸ ಅಂಗಿ ತರುವ ತನಕ ತಾನು ಮೈಯಲ್ಲಿ ಹಳೆಯ ಅಂಗಿಯೇ ಹಾಕಿಕೊಳ್ಳಲಾರೆನೆಂದು ಹಟದಿಂದ ತಿರುಗುತ್ತಿದ್ದಳು. ರಾಮಣ್ಣ ಎಷ್ಟು ಸಮಾಧಾನಪಡಿಸಿದರೂ ಆಕೆ ಕೇಳಿರಲಿಲ್ಲ. ಆದುದರಿಂದ ಆ ಮಗು ರಾತ್ರೆಯೂ ಬತ್ತಲೆಯಾಗಿ ಮಲಗಿದುದನ್ನು ಕಂಡು ರಾಮಣ್ಣನಿಗೆ ಹೊಟ್ಟೆ ಉರಿಯತೊಡಗಿತು. ಹೇಗಿದ್ದರೂ ಮೆಲ್ಲಗೆ ಬಾಗಿ ಮಗುವಿನ ಮುಖವನ್ನು ತನ್ನ ಹೃದಯಕ್ಕೊತ್ತಿ ಅಪ್ಪಿ ಆನಂದವನ್ನು ಕಂಡುಕೊಂಡು, ಅನಂತರ ಮೆಲ್ಲನೆ ಏಳುತಿದ್ದಾಗ ಅಟ್ಟದಲ್ಲಿ ಇಲಿಗಳನ್ನು ಓಡಿಸುತಿದ್ದ ಬೆಕ್ಕು 'ಮಿಯಾಂ' ಎಂದಿತು. ಇದರಿಂದಾಗಿ ತನ್ನ ಮುಂದಿನ ಕಾರ್ಯಕ್ರಮಗಳೆಲ್ಲಾ ಕೆಟ್ಟುಹೋಗಬಹುದೆಂದು ಶಂಕಿಸಿ ಜಾಗ್ರತೆಯಾಗಿ ರಾಮಣ್ಣ ನಡೆದೇ ಬಿಟ್ಟ. ಬೊಳ್ಳ ನಾಯಿ ಬೊಗಳಲು ಬಾಯೆತ್ತಿದಾಗ ರಾಮಣ್ಣನ ಕೈಯ ಎಚ್ಚರಿಕೆಯ ಸಂಜ್ಞೆ ತಿಳಿದು, ಬಾಯಿ ಮುಚ್ಚಿಕೊಂಡಿತು.

ಹೊಳೆ ದಾಟಿ, ಹೊಲ ಹಾದು, ರಾಮಣ್ಣ ನಡೆದೇ ಬಿಟ್ಟ!

---

## 19

ಬೆಳ್ಳಿ ಮೂಡಿತು. ಕೋಳಿ ಕೂಗಿತು. ರೈತರೆಲ್ಲರೂ ಬೇಗಬೇಗನೆ ಎದ್ದು ಹೊಲಗಳ ಕಡೆಗೆ ನಡೆದರು. ನೀಲಿಯ ಬಾಳಿನಲ್ಲಿ ಇನ್ನೂ ಕತ್ತಲೆ ಹೋಗಿರಲಿಲ್ಲ. ಅವಳ ಬಾಳಲ್ಲಿ ಮುಂಜಾನೆ ಮೂಡಲೇ ಇಲ್ಲ.

ನಿನ್ನೆ ರಾತ್ರೆ ಬರಿ ಹೊಟ್ಟೆಯಲ್ಲಿ ಮಲಗಿಕೊಂಡ. ಆ ಚಿಕ್ಕ ಸಂಸಾರ ನಿದ್ದೆ ಬಿಟ್ಟು ಎಚ್ಚತ್ತಿತ್ತು. ನೀಲಿ ಮಗನನ್ನು ಕರೆದಳು. ಕೂಸು ಸುಶೀಲಾ ಇಂದು ಅಂಗಿ ತರಲು ಅಪ್ಪನನ್ನು ಕಾಡುವೆನೆಂದು 'ಅಪ್ಪಾ' ಎಂದಳು. ನಾಗಿ ಗಂಡನಿಗಾಗಿ ಮನೆಯಿಡೀ ಹುಡುಕಿ ಹುಡುಕಿ ಸೋತು ಸುಣ್ಣವಾದಳು.

ಗೋಡೆಯ ಸಂದಿನಲ್ಲಿ ತೂಗುತಿದ್ದ ನೀಲಿಯ ಸೀರೆಯ ಸೆರಗು ಭಾರವಾಗಿತ್ತು. ನೀಲಿ ತವಕದಿಂದ ಸೀರೆಯ ಗಂಟನ್ನು ಬಿಚ್ಚಿ ನೋಡಿದಳು. ನೂರು ರೂಪಾಯಿಗಳ ಎರಡು ಕಾಗದದ ನೋಟುಗಳು ಕೆಳಬಿದ್ದುವು. ನೀಲಿಗೆ ಆಶ್ಚರ್ಯವೂ ಭಯವೂ ಆಯಿತು. ಮತ್ತೂ ಬಿಚ್ಚಿದಳು. ಮಡಚಿ ಮರೆಯಾಗಿದ್ದ ಕಾಗದ ಕೈಗೆ ದೊರೆಯಿತು. ಬೆಳಕಿನ ಬಳಿ ಬಂದು ಬೇಗ ಬೇಗನೆ ಓದತೊಡಗಿದಳು.

"ಅಮ್ಮಾ,

ಇನ್ನು ಕೆಲವು ಸಮಯದ ವರೆಗೆ ನಿಮ್ಮೊಡನೆ ನಾನಿರಲಾರೆ. ನನ್ನ ಮನಸ್ಸಿನಲ್ಲಿ ಕೆಲವು ದಿನಗಳಿಂದೀಚೆಗೆ ನೆಮ್ಮದಿಯಿಲ್ಲ. ತಲೆಯೇ ಕೆಟ್ಟಂತಾಗಿದೆ. ಪ್ರಪಂಚವೇ ಶೂನ್ಯವಾಗಿ ಕಾಣುತ್ತಿದೆ. ನೀನು ನನ್ನನ್ನು ಕ್ಷಮಿಸಬೇಕು. ನನ್ನ ನೌಕರಿಯಲ್ಲಿ ಗಳಿಸಿದ ಹಣದಲ್ಲಿ ಸ್ವಲ್ಪವನ್ನು ಇದರ ಜತೆಯಲ್ಲಿ ಮಡಗಿದ್ದೇನೆ. ನೀನೂ—ನನ್ನ ಮಗು ಸುಸೀಲಾಳೂ ಇದರಿಂದ ತತ್ಕಾಲ ಜೀವನ ಮಾಡಿರಿ. ಸುಸೀಲಾಳಿಗೆ ಒಂದು ಹೊಸ ಅಂಗಿಯನ್ನು ಈ ದಿನವೇ ಪೇಟೆಯಿಂದ ತರಿಸಿಕೊಡಿರಿ. ಜೀವನದಲ್ಲಿ ಯಾವ ಕಷ್ಟಗಳೂ ಬಂದರೂ ಎದೆಗೆಡಬೇಡಿರಿ. ದೇವರು ನಿನಗೂ ಸುಸೀಗೂ ಮಂಗಳವನ್ನುಂಟುಮಾಡಲಿ. ನಿಮಗೆ ಅನಂತ ಪ್ರಣಾಮಗಳು."

ನೀಲಿಗೆ ರಾಮಣ್ಣ ಪತ್ರದಲ್ಲಿ ಬರೆದ ಒಂದೊಂದು ಅಕ್ಷರಗಳೂ ಕೊಡಲಿಯಂತೆ ಎದೆಯನ್ನು ಕೊರೆಯಲಾರಂಭಿಸಿತು. ಕಣ್ಣೀರು ಪತ್ರವನ್ನೆಲ್ಲಾ ಒದ್ದೆಮಾಡಿಬಿಟ್ಟಿತು. ನಾಗಿ ವೇಗದಿಂದ ಬಂದು ಅತ್ತೆಯಿಂದ ಪತ್ರವನ್ನು ಎಸೆದುಕೊಂಡು ಓದತೊಡಗಿದಳು. ಎಲ್ಲವೂ ನೀಲಿಗೆ ಮತ್ತು ಮಗು ಸುಸೀಲಾಗೆ ಮಾತ್ರ ಸಂಬಂಧಿಸಿದ ವಿಚಾರವಲ್ಲದೆ ತನ್ನ ಕುರಿತು ಒಂದೇ ಒಂದು ಶಬ್ದವೂ ಪತ್ರದಲ್ಲಿ ಉಲ್ಲೇಖಿಸಿರಲಿಲ್ಲ. ನಾಗಿ ಓದುತ್ತಿದ್ದಂತೆಯೇ ಮೂರ್ಛೆ ಹೋದಳು. ನೀಲಿಗೆ ತನ್ನ ಬೇಗುದಿಯ ಮಧ್ಯೆ ನಾಗಿಯನ್ನು ಚೇತರಿಸುವ ಚೇತನವಿರಲಿಲ್ಲ. ಮೂರ್ಛೆ ತಿಳಿದೆದ್ದ ನಾಗಿ ಪತ್ರವನ್ನು ಪುನಃ ಪುನಃ ಓದತೊಡಗಿದಳು. ರಾಮಣ್ಣ ಪತ್ರದಲ್ಲಿ ತಾಯನ್ನು ಉದ್ದೇಶಿಸಿ "ನೀನು ಮತ್ತು ಸುಸೀಲಾ ಎದೆಗೆಡದೆ ಜೀವನ ನಡೆಸಿರಿ" ಎಂದು ಮಾತ್ರ ಬರೆದಿದ್ದ. ನಾಗಿಯ ವಿಚಾರವೇನು? ಆಕೆ ರಾಮಣ್ಣನ ದೃಷ್ಟಿಯಲ್ಲಿ ಆ ಸಂಸಾರವನ್ನೇ ಸುಟ್ಟ ವಿಷಜಂತುವಾಗಿದ್ದಳು. ಆಕೆಗೆ ಪ್ರಪಂಚದಲ್ಲೇ ಇನ್ನು ಸ್ಥಾನ ದೊರೆಯಬಾರದೆಂದೂ ಆಕೆ ಇನ್ನು ಬಾಳಬಾರದೆಂದೂ ಆತ ಎಣಿಸಿದ್ದನೋ ಏನೋ!

ನಾಗಿ ನಿರಪರಾಧಿನಿಯೆಂದು ಅತ್ತೆ ನೀಲಿಗೆ ಅರಿತಿದ್ದರೂ ಪ್ರಕೃತದ ದುರಂತ ಘಟನೆಯಿಂದಾಗಿ ದಾರಿಗಾಣದೆ, ಬುದ್ಧಿಭ್ರಮಣವಾಗಿ ಆಕೆಯೂ ನಾಗಿಯ ಮೇಲೆ ಕೋಪದ ಜ್ವಾಲೆ ಕಾರತೊಡಗಿದಳು.

ನಾಗಿ ಇನ್ನೊಮ್ಮೆ ಮೂರ್ಛೆ ಹೋದಳು. ಏನನ್ನೂ ಅರಿಯದ ಆಕೆಗೆ ಈ ಶಿಕ್ಷೆಯೇ? ಆಕೆಗೆ ಗಂಡನಿಲ್ಲದ ಆ ಮನೆ ಮಸಣದಂತೆ ಕಾಣತೊಡಗಿತು. ನೆಲದ ಮೇಲೆ ಹಾಗೆಯೇ ದುಃಖಿಸುತ್ತಾ, ಅಳುತ್ತಾ ಮಲಗಿಕೊಂಡಳು.

ನೀಲಿ ದುಃಖದ ಆವೇಶವನ್ನು ತಡೆದುಕೊಂಡು ಈ ಸಂಗತಿಗಳನ್ನು ತನ್ನ ಹಿರಿಯ ಮಗ ಮಾಧವನಿಗೆ ತಿಳಿಸಿಬರುವೆನೆಂದು ಸುಶೀಲಾಳನ್ನು ಎತ್ತಿಕೊಂಡು ಹೊರಡಲನುವಾದಳು.

"ಅಮ್ಮನೂ ಬರಲಿ . . . . ." ಎಂದು ಸುಶೀಲಾ ಹಟಹಿಡಿದಾಗ ಬುದ್ಧಿ ಭ್ರಮಣವಾಗಿದ್ದ ನೀಲಿ ಆವೇಶದಿಂದ "ಸಾಕು ನಿನ್ನ ಅಮ್ಮನ ಉಪಕಾರ. ಅವಳಿಂದ ಇಷ್ಟಾದುದೇ ಸಾಕು." ಎಂದು ಗೊಣಗುಟ್ಟುತ್ತಾ ಸುಶೀಲಾಳನ್ನು ಎತ್ತಿಕೊಂಡು ನಡೆದೇಬಿಟ್ಟಳು.

ಸಂಜೆಯಾದಾಗ ನಾಗಿ ಎದ್ದು ಕುಳಿತಳು. ದೇಹವಿಡೀ ಹಸಿವಿನಿಂದ ನಡುಗುತಿತ್ತು. ದುಃಖ ಮತ್ತು ಅವಮಾನದಿಂದ ಮನಸ್ಸು ನೋಯುತಿತ್ತು. ಯಾರಿಗೂ ಬೇಡವಾದ ಜೀವವನ್ನಿಟ್ಟುಕೊಂಡು ಆಕೆ ಬದುಕುವುದಾದರೂ ಏತಕ್ಕಾಗಿ? ನಾಗಿಯೂ ನಿಟ್ಟುಸಿರಿಡುತ್ತಾ ಮನೆಬಿಟ್ಟು ನಡೆದಳು. ಆಕೆ ಹೋಗುವುದೆಲ್ಲಿ ಎಂದು ಅವಳೇ ಅರಿತಿದ್ದಳೋ ಏನೊ? ಎಲ್ಲಾದರೂ ಹೋಗಿ ತನ್ನ ಜೀವವನ್ನು ತ್ಯಜಿಸಿ ಬಿಡಬೇಕೆಂಬುದೇ ಆ ಹೆಣ್ಣು ಹೃದಯದ ಕೊನೆಯ ಬಯಕೆಯಾಯಿತು.

ಮಾಧವನ ಹೆಂಡತಿ ಕಮಲನಿಗೆ ಅತ್ತೆ ನೀಲಿಯಿಂದ ಎಲ್ಲಾ ವೃತ್ತಾಂತವೂ ದೊರೆಯಿತು. ರಾಮಣ್ಣ ಮನೆಯಿಂದ ಹೊರಟುಹೋದುದೂ, ನಾಗಿಗೆ ಬಂದೊದಗಿದ ವಿಪತ್ತೂ ಆಕೆಗೆ ದುಃಖವನ್ನುಂಟುಮಾಡದೆ ಇರಲಿಲ್ಲ. ಆದರೂ ಕವಿತ್ತಯವರ ಹೆಂಡತಿ ಭಾಗೀರಥಿಯವರ ಮೇಲಿನ ವಿಶ್ವಾಸ ಆಕೆಗೆ ಎಲ್ಲಕ್ಕಿಂತಲೂ ಪ್ರಬಲವಾಗಿತ್ತು. ಎಲ್ಲಕ್ಕಿಂತಲೂ ಮೇಲಾಗಿ ತಾನು ಪ್ರಸವಿಸಲಿಲ್ಲವೆಂದು ಬೇಸರದಿಂದಿರುವಾಗ ದಾಮೋದರನನ್ನು ಕಳುಹಿಸಿ, ತನ್ನ ಭಾವನ ಹೆಂಡತಿಯಿಂದ ಮದ್ದು ತರಿಸಿ ಕೊಟ್ಟ ನಂತರ ಆಕೆಯಲ್ಲಿ ಗರ್ಭದ ಸಂಜ್ಞೆಯೂ ಇದ್ದಂತೆ ಆಕೆಗೆ ವಿಶ್ವಾಸವಿತ್ತು. ಕಮಲು ಓಡಿ ಈ ವಿಚಾರವನ್ನು ಭಾಗೀರಥಿಗೂ ತಿಳಿಸಿದಾಗ ಆಕೆ ಸಂತಸದಿಂದ ನಕ್ಕು ನಲಿದಳು.

ನಾಗಿ ನಡೆದು ನಡೆದು ಸಮುದ್ರ ಕಿನಾರೆಯನ್ನು ಮುಟ್ಟಿದಳು. ಇನ್ನರೆ ಕ್ಷಣ ಕಳೆದು ಹೋದರೆ ಆಕೆಯ ಜೀವನದ ಸಮರವು ಸಮಾಪ್ತಿಯಾಗಬೇಕು. ಆಕೆ ನೀರಿಗೆ ಹಾರಿ ಜೀವವನ್ನು ಕಳೆದುಕೊಳ್ಳುವಳು. ಭೂದೇವಿಗೆ ತನ್ನ ಅಂತಿಮ ಪ್ರಣಾಮವನ್ನು ಮಾಡಿ ಆಕೆ ನೀರಿಗೆ ಹಾರಿಯೇ ಬಿಟ್ಟಳು.

ಊರಿನಲ್ಲಿ ಸುದ್ದಿಯೇ ಸುದ್ದಿ. ಕವಿತ್ತಯ ಹೆಂಡತಿ ಭಾಗೀರಥಿ ಅಟ್ಟ

ದಿಂದ ನಾಗಿ ಸಮುದ್ರ ಕಿನಾರೆಗೆ ಹೋಗುತಿದ್ದುದನ್ನು ಕಂಡಿರುವಳಂತೆ. ಮಾರಪ್ಪ ಶೆಟ್ರ ಹೆಂಡತಿ ಕೆರೆಗೆ ಬಟ್ಟೆ ಒಗೆಯಲು ಹೋಗುತಿದ್ದವರು ತಾನೂ ನೋಡಿರುವೆನೆಂದರಂತೆ. ಎಲ್ಲರೂ ನಾಗಿ ಸಮುದ್ರಕ್ಕೆ ಹಾರಿ ಸತ್ತಳೆಂದರು. ಮಮ್ಮದೆ—ಬೀಪಾತುಮ್ಮರೂ ಸುದ್ದಿಯನ್ನು ನಂಬಿ ಕನಿಕರಗೊಂಡರು. ನೀಲಿ ಸುಸೀಲಾಳನ್ನು ಎತ್ತಿಕೊಂಡು ಮನೆಗೆ ಹಿಂತಿರುಗಿದಾಗ ನಾಗಿ ಇರಲಿಲ್ಲ. ನೀಲಿಯೂ ಕೋಪದಿಂದ ರೇಗಿ ನಾಗಿಯ ಅವಹೇಳನ ಮಾಡಿದುದು ನಿಜ. ಆದರೆ ನಾಗಿ ಇಷ್ಟು ಮುಂದುವರಿಯುವಳೆಂದು ಅವಳು ಕನಸಿನಲ್ಲಿಯೂ ನಂಬಿರಲಿಲ್ಲ. ನೀಲಿ ಗೋಳೋ ಎಂದು ಬೊಬ್ಬಿಟ್ಟು ಅಳಲಾರಂಭಿಸಿದಳು. ಊರಿನ ಹೆಂಗಸರೆಲ್ಲಾ ಮನೆಗೆ ಬಂದು ನೀಲಿಯನ್ನು ಸಂತೈಸತೊಡಗಿದರು.

ಚಂದ್ರಮತಿ ತವರುಮನೆಯಿಂದ ಹಿಂದಿರುಗಿದಾಗ ಈ ದುರಂತವನ್ನು ಕೇಳಿದಾಗಲೇ ಮೂರ್ಛೆಹೋದರು. ಬೀಸಣಿಗೆ ಮತ್ತು ಬೆನಾರಸ್ ಸೀರೆಯ ನಿಜ ವೃತ್ತಾಂತವನ್ನು ತಾನೆ ಹೇಳಿ ಶ್ಯಾನುಭಾಗರನ್ನು ಸಮಧಾನಗೊಳಿಸುವೆನೆಂದು ತವಕದಿಂದ ಅಲ್ಲಿಗೆ ನಡೆದರು. ಕೆಲಸವೆಲ್ಲವೂ ಇದರೊಳಗಾಗಿಯೇ ಮುಗಿದುಹೋಗಿತ್ತು. ಚಂದ್ರಮತಿ ಒಂದು ದಿನ ಮೊದಲು ಬರುತಿದ್ದರೆ ಆ ಸಂಸಾರ ಉಳಿದುಬಿಡುತಿತ್ತು. ಚಂದ್ರಮತಿ ನೀಲಿಯೊಡನೆ ಅಳತೊಡಗಿದರು. ಅತ್ತರೆ ಸುಖವಿಲ್ಲ. ನಾಗಿ ಆತ್ಮಹತ್ಯೆ ಮಾಡಿಕೊಂಡ ಅನಂತರವಾದರೂ ಅವಳ ಬೆನ್ನಹಿಂದೆ ಅನ್ಯಾಯವಾದ ಈ ಅಪವಾದವು ಉಳಿಯಬಾರದು. ಚಂದ್ರಮತಿ ಅಲ್ಲಿ ನೆರೆದಿದ್ದವರಿಗೆಲ್ಲಾ ಬೀಸಣಿಗೆ ಮತ್ತು ಬೆನಾರಸ್ ಸೀರೆಯ ನಿಜವೃತ್ತಾಂತವನ್ನು ತಿಳಿಸಿದರು. ನಾಗಿಯಂತಹ ಸ್ತ್ರೀ ರತ್ನ ಇನ್ನೊಂದಿಲ್ಲವೆಂದು ವಾದಿಸಿದರು. ಇದನ್ನು ಕೇಳಿದೊಡನೆ ಅಲ್ಲಿದ್ದವರೆಲ್ಲರೂ ದುಃಖದಿಂದ ಬೆಂದುಹೋದರು. ನಾಗಿ ನಿರಪರಾಧಿಯೆಂದು ಎಲ್ಲರೂ ಒಪ್ಪಿಕೊಂಡರು. ಆದರೆ ನಾಗಿ ಇನ್ನೆಲ್ಲಿ?

ಎಲ್ಲರೂ ಅಳುತಿದ್ದುದನ್ನು ನೋಡಿ ಸುಸೀಲಾ ಅಳದಿರುವಳೇ? "ಮಗೂ ನಿನ್ನ ಅಮ್ಮನೂ ಅಪ್ಪನೂ ಕೆಲವು ದಿನ ಕಳೆದು ಮತ್ತೆ ಬರುವರು" ಎಂದು ನೀಲಿ ಏನೂ ತಿಳಿಯದ ಆ ಮಗುವಿಗೆ ಸಮಾಧಾನಪಡಿಸಿದಳು.

---

## 20

ಮಂಜೇಶ್ವರದಿಂದ ಮಂಗಳೂರಿಗೆ ಹತ್ತು ಮೈಲಿಗಳಷ್ಟು ದೂರ. ಹತ್ತು ಮೈಲು ರಾತ್ರೆಯೇ ಕಾಲುನಡೆಯಾಗಿ ನಡೆದ ರಾಮಣ್ಣ ತುಂಬಾ ಆಯಾಸ ಗೊಂಡಿದ್ದ. ಬಸ್ಸು ನಿಲ್ದಾಣವೆಲ್ಲಿ ಎಂದು ಆತ ಅರಿತವನೇ. ಮಂಗಳೂರಿಂದ ಮುಂಬಯಿಗೆ ಹೋಗುವವರು ಕಡೂರು ತನಕ ಬಸ್ಸಿನಲ್ಲಿ ಹೋಗುತ್ತಾರೆ. ಅದು ಬೆಳಗಾಗುವ ಮೊದಲೇ ಹೊರಟುಬಿಡುತ್ತದೆ.

ರಾಮಣ್ಣ ಮಂಗಳೂರಿಗೆ ಮುಟ್ಟಿದಾಗ ಕತ್ತಲು ಇನ್ನೂ ಇತ್ತು. ಕೈಯಲ್ಲಿ ಬೆಳಕಿಲ್ಲ. ಅಂತಹ ಕತ್ತಲಲ್ಲಿ ಆ ಹತ್ತು ಮೈಲು ಏಕಾಂಗಿಯಾಗಿ ರಾಮಣ್ಣನಿಗೆ ನಡೆಯಲು ಎಷ್ಟು ಪ್ರಯಾಸವಾಯಿತೋ ಅವನೇ ಬಲ್ಲ. ದಾರಿಯೇನು ಅಷ್ಟು ಸುಲಭದ ದಾರಿಯಲ್ಲ. ದಾರಿಯುದ್ದಕ್ಕೂ ಕಲ್ಲುಗಳು, ಮುಳ್ಳುಗಳು ಎದ್ದುನಿಂತಿವೆ. ಅವನ್ನೆಲ್ಲಾ ಸೈರಿಸಿಕೊಂಡು, ಹೆಜ್ಜೆಹೆಜ್ಜೆಗೂ ನಿಟ್ಟುಸಿರಿಡುತ್ತಾ ರಾಮಣ್ಣ ಮುಟ್ಟಿದ್ದಾನೆ. ಹಸಿವಿನಿಂದ ಕರುಳು ಕುದಿಯುತಿತ್ತು.

ಬಸ್ ನಿಲ್ದಾಣದಲ್ಲಿ, ಬಸ್ಸಿಗಾಗಿ ಕಾಯುವ ಗುಂಪಿನಲ್ಲಿ ನುಗ್ಗಿಕೊಂಡ ರಾಮಣ್ಣ. ಮಕ್ಕಳು ಮರಿಗಳನ್ನು ಕಟ್ಟಿಕೊಂಡು ಯಾತ್ರೆಗೆ ಹೋಗುವವರಿದ್ದಾರೆ. ಒಂದು ಊರಿನಿಂದ ಇನ್ನೊಂದು ಊರಿಗೆ ವರ್ಗಾಯಿಸಲ್ಪಟ್ಟು ಹೊಸ ಸ್ಥಳಕ್ಕೆ ಹೋಗುವ ನೌಕರರಿದ್ದಾರೆ. ನೆಂಟರ ಮದುವೆಗೆ ಸಂಭ್ರಮದಿಂದ ಹೋಗುವವರಿದ್ದಾರೆ. ಹತ್ತಿರದ ಬಂಧುಗಳು ದೂರದೂರಿನಲ್ಲಿ ಸೌಖ್ಯವಿಲ್ಲದೆ ಆಸ್ಪತ್ರೆಯಲ್ಲಿರುವರೆಂದು ತಂತಿ ಬಂದು ಗಾಬರಿಪಟ್ಟು ಹೋಗುವವರಿದ್ದಾರೆ. ಊರಲ್ಲಿ ಕೆಲಸವಿಲ್ಲದೆ ಜೀವನ ನಡೆಸಲು ಸಾಧ್ಯವಿಲ್ಲದೆ 'ಎಲ್ಲಾದರೂ' ಹೋಗೋಣವೆಂದು ಹೊರಟವರಿದ್ದಾರೆ. ಕಳ್ಳತನ, ದರೋಡೆ, ಮೋಸಗಳಿಂದ ಕಿಸೆತುಂಬಿಸಿಕೊಂಡು ತಲೆತಪ್ಪಿಸಿಕೊಳ್ಳಲು ಬಂದವರಿದ್ದಾರೆ. ಎಂತಹ ವಿಚಿತ್ರ ಜಗತ್ತು! ಬಸ್ಸಿಗೆ ಹೋಗಲು ಹೊರಟ ಪ್ರಯಾಣಿಕರ ಕತೆ ಹೀಗಾದರೆ ಬಸ್ಸಿಗೆ ಹೋಗದೆ ಬಸ್ ನಿಲ್ದಾಣದಲ್ಲಿ ಅಂಡಲೆಯುವ ಇತರರ ಕತೆಯೇ ಇನ್ನೊಂದು. ಅವರಲ್ಲಿ ಕೂಲಿ ಮಾಡುವವರ ತಂಡ ಒಂದು. ಕಿತ್ತಳೆ ಹಣ್ಣು, ಬಾಚಣಿಗೆ, ಊದುಬತ್ತಿ ಮಾರುವವರ ತಂಡ ಇನ್ನೊಂದು. ಭಗವದ್ಗೀತೆ, ದಾಸರ ಹಾಡುಗಳನ್ನು ಹಾಡುತ್ತಾ ತಾವು ಹಾಡಿದ ಹಾಡುಗಳ ಪುಸ್ತಕಗಳನ್ನು ಮಾರುವವರ ತಂಡ ಇನ್ನೊಂದು. ಹೀಗೆಲ್ಲಾ ಅಲ್ಲಿನ ಕತೆಯೇ ಕತೆ. ಹೀಗೆ

ಗಲಿಬಿಲಿಮಾಡುತ್ತಾ ನಿಂತಿದ್ದ ಜನಸಂದಣಿಯ ಮಧ್ಯೆ ಎದೆಯುಬ್ಬಿಸಿಕೊಂಡು ಬರುವ ಬಸ್ ಏಜಂಟರು, ಕಂಡಕ್ಟರುಗಳು; ಅವರಂತಹ ದೊಡ್ಡ ಮನುಷ್ಯರು ಲೋಕದಲ್ಲಿಯೇ ಯಾರೂ ಇಲ್ಲದಂತೆ ಭಾಸವಾಗುತಿತ್ತು. ಅವರ ಸ್ಥಾನ ಮಾನಗಳೇನು ಕಡಿಮೆಯದಲ್ಲ. ಟಿಕೇಟ್ ಬೇಕಾದರೆ ಹತ್ತು ಸಲ ಅವರನ್ನು 'ಸ್ವಾಮಿಾ' ಎಂದು ಕರೆಯಬೇಕು; ಹದಿನೈದು ಸಲ 'ಸಾರ್' ಅನ್ನಬೇಕು; ಇಪ್ಪತ್ತು ಸಲ 'ರಾಯರೇ' ಎಂದು ನುಡಿಯಬೇಕು. ಇವೆಲ್ಲ ಶಬ್ದಗಳು ಅವರ ಕಿವಿಗೆ ಕರ್ಕಶವಾಗಿ ಕೇಳಿಸುತ್ತಿವೆಯೇ ಹೊರತು ಪ್ರಯಾಣಿಕರ ಪಾಡು, ಆ ದಿನ ಅವರಿಗೆ ಟಿಕೇಟು ದೊರೆಯದೆ ಹೋದರೆ ಅವರಿಗೆ ಬಂದೊದಗಬಹು ದಾದ ವಿಪತ್ತುಗಳೆಲ್ಲಾ ಹೇಗೆ ಅರ್ಥವಾಗಬೇಕು?

"ದೂರ ಸರಿಯಿರಿ—ದೂರ. ಒಮ್ಮೆ ಹೇಳುವುದು—ತಪ್ಪಿದರೆ ಎರಡು —ಮೂರು ಸಲ. ಮತ್ತೂ ಅರ್ಥವಾಗದ ಈ ಕುರಿಗಳಿಗೆ ಹೇಗೆ ಹೇಳಬೇಕು. ಟಿಕೇಟು ಇಲ್ಲವಯ್ಯಾ. ಹೋಗಿ. ಹೂಂ . . ."

ಟಿಕೇಟಿನ ಸುದ್ದಿ ಕೇಳಿದಾಗ ರಾಮಣ್ಣನಿಗೆ ತಾನು ಟಿಕೇಟು ಪಡೆದು ಕೊಳ್ಳಲಿಲ್ಲವೆಂದು ನೆನಪಾಯಿತು. ಒಡನೆಯೇ ಏಜಂಟರ ಬಳಿ ಹೋಗಿ ಟಿಕೇಟು ಬೇಡಿದ.

"ಹ್ಹೊ ಹ್ಹೊ! ಇಷ್ಟು ಜನರನ್ನು ಹೇಗಾದರೂ ಕಳುಹಿಸಿದೆ. ನಿನ್ನ ನಿದ್ದೆ ಈ ತನಕ ಬಿಟ್ಟಿರಲಿಲ್ಲವೆಂದು ಕಾಣುತ್ತದೆ. ಎಲ್ಲಿದ್ದೆ ಮಹಾರಾಯಾ ಈ ತನಕ? ಇನ್ನೂ ಸ್ವಲ್ಪ ನಿದ್ದೆಮಾಡಿ ಬರಬಹುದಿತ್ತಲ್ಲವೆ? ಹೇ . . ನಿನ್ನ ಸ್ವರೂಪವೇ! ಹೋಗು—ನಾಳೆ ಬಾ" ಏಜಂಟರು ಗರ್ಜಿಸಿದರು. "ಬೇಡದ ಮಾತಿನಲ್ಲಿ ಬೈಯುವುದೇಕೆ ಸ್ವಾಮಿಾ! ಟಿಕೇಟು ಮುಗಿದು ಹೋಯಿತು— ಇಲ್ಲ, ಎಂದರಾಯಿತಲ್ಲಾ. ನಾನೇನು ಕೊಟ್ಟೇ ತೀರಬೇಕೆಂದು ಬಲವಂತಪಡಿ ಸಿದೆನೇ ನಿಮ್ಮನ್ನ? ಮತ್ತೆ ನನ್ನ ಸ್ವರೂಪ ಹೇಗಿದ್ದರೆ ನಿಮಗೇನಾಯಿತು ಸ್ವಾಮಿಾ?" "ಹೊ ಹ್ಹೊ! ನೀನೊಬ್ಬ ಬಹಳ ಸಂಭಾವಿತ. ನಿನ್ನನ್ನು ಕರೆದು ಕುರ್ಚಿಯಲ್ಲಿ ಕುಳ್ಳಿರಿಸಿ ಸತ್ಕರಿಸಿ ಜಾಗೃತೆಯಾಗಿ ಮಾತನಾಡಿಸಬೇಕಿತ್ತು? ಕಳ್ಳ! ನನ್ನ ಇಪ್ಪತ್ತು ವರ್ಷದ ಸರ್ವಿಸಿನಲ್ಲಿ ನಿನ್ನಂತವನನ್ನು ನೋಡಲಿಲ್ಲ. ಟಿಕೇಟು ಕೊಟ್ಟೇ ತೀರಬೇಕೆಂದು 'ನಾನು ಬಲವಂತಪಡಿಸಿದೆನೇ?' ಎಂದು ಸವಾಲು ಮಾಡಿದ್ದಿ? ಕೊಟ್ಟೇ ತೀರಬೇಕೆಂದು ಬಲವಂತಪಡಿಸುವ ಮಾತಿರಲಿ—ಕೈ ಮುಗಿದು ಕೇಳಿದರೆ ನಿನಗೆ ಕೊಡುತಿದ್ದೆ ಎಂದು ಭಾವಿಸಿರುವೆಯಾ? ಹೋಗು

—ನೀನು ಮಾಡುವುದೆಲ್ಲಾ ಮಾಡು. ಇನ್ನು ಮೂರು ದಿನ ಕಳೆದರೂ ನಿನಗೆ ಟಿಕೇಟು ಕೊಡುವುದಿಲ್ಲ. ಹೋಗು. ನೀನು ಪ್ರಯಾಣ ಮಾಡುವುದು ಬೇಡ. ಮನೆಗೆ ಹೋಗಿ ಸುಖವಾಗಿರು. ಹೋಗಾ . . . . ಹೋಗು ಇಲ್ಲಿಂದ . . . . ”

ರಾಮಣ್ಣ ತಣ್ಣಗಾದ. ಪ್ರಪಂಚ ಇಷ್ಟು ಕ್ರೂರತರದ್ದೆಂದು ಆತನ ಇಷ್ಟರ ತನಕದ ಅನುಭವದಲ್ಲಿ ಬಂದಿರಲಿಲ್ಲ. ಏಜಂಟರಲ್ಲಿ ಜಗಳವಾಡಿದರೆ ಸುಖವಿಲ್ಲ. ಟಿಕೇಟು ದೊರೆಯದೆ ಹೋದರೆ ಅದಕ್ಕಿಂತಲೂ ದೊಡ್ಡ ಗಂಡಾಂತರ. ಮೆಲ್ಲನೆ ಅಲ್ಲಿಂದ ಸರಿದು, ಪ್ರಯಾಣಿಕರ ಮಧ್ಯೆ ನಿಂತು, ಅವರ ಸಾಮಾನುಗಳನ್ನೆಲ್ಲಾ ಪರೀಕ್ಷಿಸುತ್ತಾ ಟಿಕೇಟು ಪಡೆಯದ ಮಕ್ಕಳ ವರ್ಷ ಕೇಳುತ್ತಾ, ಕಿತ್ತಳೆ ಹಣ್ಣಿನ ಒಂದು ತುಂಡನ್ನು ಬಾಯಲ್ಲಿಟ್ಟುಕೊಂಡು, ತನ್ನ ‘ಸಿಪಾಯಿಗಿರಿ’ ಅವರಿಗೆಲ್ಲಾ ತೋರಿಸುತ್ತಾ ಆಚೀಚೆ ತಿರುಗಾಡುತಿದ್ದ ಕಂಡಕ್ಟರ್ ಸಾಹೇಬರ ಬಳಿಗೆ ಹೋಗಿ ರಾಮಣ್ಣ ಕಿವಿಯಲ್ಲಿ ಏನೋ ಹೇಳಿದ. ಕಣ್ಣು ಕೆರಳಿಸಿ ರಾಮಣ್ಣನ ಮುಖವನ್ನೇ ದಿಟ್ಟಿಸುತ್ತಾ ನಿಂತಿದ್ದ ಕಂಡಕ್ಟರನ ಮುಂದೆ ಅಂಗಾಲಾಚಿ ಹೇಗಾದರೂ ಮಾಡಿ ತನಗೊಂದು ಟಿಕೇಟ್ ದಯ ಪಾಲಿಸದೆ ನಿರ್ವಾಹವಿಲ್ಲ ಎಂದು ಬೇಡಿಕೊಂಡ.

“ಅದೆಲ್ಲಾ ‘ಚಪ್ಡಾಸ್’* ನನ್ನಲ್ಲಿ ನಡೆಯಲಿಕ್ಕಿಲ್ಲವಯ್ಯಾ. ಹೋಗಿ ನಿಮ್ಮ ಕೆಲಸ ನೋಡಿ” ಎಂದ ಕಂಡಕ್ಟರನ ಕಿವಿಯಲ್ಲಿ ರಾಮಣ್ಣ ಇನ್ನೇನೋ ಹೇಳಿದ.

“ಇಲ್ಲಿಂದ ‘ಓವರ್‌ಲೋಡ್’ ಮಾಡಲಿಕ್ಕೆ ಸಾಧ್ಯವಿಲ್ಲ. ನಿಮಗೇನು? ನೀವು ಸುಖವಾಗಿ ಹೋಗುವಿರಿ. ನಾಳೆ ಪೋಲೀಸಿನವರ ಬಾಯಲ್ಲಿ ಸಿಕ್ಕು ವುದು ನಾವು. ‘ಓವರ್‌ಲೋಡು’ ಅಂತ ಪೋಲೀಸಿನವರು ರಿಕಾರ್ಡ್ ಮಾಡಿ ಬಿಟ್ಟರೆ ಕೋರ್ಟಿನಲ್ಲಿ ಎಪ್ಪತ್ತೈದು ರೂಪಾಯಿ ದಂಡ ನಾನು ಕೊಡಬೇಕು. ನನಗೇನು ಪಿತ್ರಾರ್ಜಿತದ ಆಸ್ತಿಯಿಲ್ಲ. ಆಯಿತು. ಕಂಕನಾಡಿಯಿಂದ ಅರ್ಧ ಫರ್ಲಂಗ್ ವರೆಗೆ ನಡೆದುಕೊಂಡು ಹೋಗಿ ಅಲ್ಲಿಂದ ಬಸ್ ಹತ್ತಿರಿ. ಇನ್ನು ಹದಿನೈದು ನಿಮಿಷಗಳಲ್ಲಿ ಬಸ್ ಅಲ್ಲಿಗೆ ಮುಟ್ಟುತ್ತದೆ. ಬೇಗ ಹೋಗಿ . . . . ” ಎಂದು ಕಂಡಕ್ಟರ್ ಅನುಗ್ರಹ ಮಾಡಿದರು. ರಾಮಣ್ಣ ದೂರ

---

*ಕಪಟ

ಬದುಕಿಕೊಂಡೆನೆಂದು ಕಂಡಕ್ಟರ್ ಹೇಳಿದಷ್ಟು ನಡೆದು ಬಸ್ ಬರುವಾಗ ಕೈತೋರಿಸಿದ.

ಬಸ್ ನಿಂತಿತು.

"ಹೂಂ. ಬೇಗ ಹತ್ತಿ. ಮದುಮಗನಂತೆ ಮಾಡಿದರಾಗುವುದಿಲ್ಲ, ಹನ್ನೆರಡು ಗಂಟೆಗೆ ಸರಿಯಾಗಿ ಕಡೂರಿಗೆ ಮುಟ್ಟಬೇಕು" ಡ್ರೈವರ್ ನಿರ್ದಾಕ್ಷಿಣ್ಯವಾಗಿ ನುಡಿದುಬಿಟ್ಟರು.

ರಾಮಣ್ಣ ಅವಸರವಸರವಾಗಿ ಬಸ್ ಹತ್ತಿದ. "ಏನಯ್ಯಾ . . . ನಿನ್ನ ಕಣ್ಣು ಸುಟ್ಟುಹೋಗಿದೆಯೇ? ಕಾಲಿನ ಮೇಲೆ ನಡೆದೆಯಲ್ಲಾ . . . ಅಯ್ಯೋ ನೋವು" ಎಂದು ಒಬ್ಬ ಪ್ರಯಾಣಿಕರು ಪ್ರಲಾಪವೆತ್ತಿದರು. "ಆಗಲಿ ಸ್ವಾಮಿ . . . ಸ್ವಲ್ಪ ಸಹನೆ ಬೇಕು. ಬೇಕೆಂದೇ ಅವರು ಮೆಟ್ಟಿದ್ದಲ್ಲವಲ್ಲಾ" ಎಂದು ಬಸ್‌ನಲ್ಲಿದ್ದ ಒಬ್ಬರು ರಾಮಣ್ಣನ ಪರವಾಗಿ ವಾದಿಸಿದರು. ಅದರಿಂದಾಗಿ ಜಗಳ ಬೆಳೆಯಲಿಲ್ಲ.

ಹಳ್ಳಿಯ ನಿರಾತಂಕ-ನಿರ್ಭಯ ಜೀವನವೆಲ್ಲಿ? ಪೇಟೆಯ ಈ ಕ್ರೂರ ಸನ್ನಿವೇಶಗಳೆಲ್ಲಿ? ರಾಮಣ್ಣನಿಗೆ ಇನ್ನೆಷ್ಟೋ ಹೊಸ ಹೊಸ ಅನುಭವಗಳಾಗಲಿವೆ. ಒಂದೊಂದು ಅನುಭವದಿಂದ ಒಂದೊಂದು ಹೊಸ ಪಾಠವನ್ನು ಆತ ಕಲಿಯಲಿಕ್ಕಿದೆ. ಕಷ್ಟಗಳು ಮೋಡ ರಾಶಿಯಂತೆ ಆತನ ಜೀವನದ ಆಗಸದಲ್ಲಿ ಮುಸುಕಿಕೊಳ್ಳಲಿವೆ. ಸಾಧು ಪತ್ನಿಯನ್ನು ಅಪರಾಧದ ಶಿಲುಬೆಗೆ ತೂಗಿದ ಅವಿವೇಕಕ್ಕೆ, ಬಡ ತಾಯಿ—ಏನೂ ಅರಿಯದ ಅನಾಥ ಮಗು ಇವರನ್ನು ನಿರ್ಗತಿಕರನ್ನಾಗಿ ಮಾಡಿ ಬಂದ ರಾಮಣ್ಣನೀಗ ಜೀವನದ ಹೋರಾಟದ ಅಗ್ನಿಕುಂಡದಲ್ಲಿ ಬೇಯಲಿದ್ದಾನೆ.

"ನಿಮ್ಮನ್ನು ಎಲ್ಲಿಯೋ ನೋಡಿದ ನೆನಪು ಇದೆ. ಎಲ್ಲಾಯಿತು ಊರು? ಎಲ್ಲಿಗೆ ಹೋಗುವಿರಂತೆ?" ರಾಮಣ್ಣನನ್ನು ಬಸ್ಸಿನಲ್ಲಿ ಯಾರೋ ಪ್ರಶ್ನಿಸಿದಂತಾಯಿತು. ಮುಖ ತಿರುಗಿಸಿ ನೋಡಿದರೆ ಒಂದರೆ ತಾಸಿನ ಹಿಂದೆ ತನ್ನ ಪರವಾಗಿ ಬಸ್ಸಿನಲ್ಲಿ ವಾದಿಸಿದ ಸಹಪ್ರಯಾಣಿಕರು ತನ್ನನ್ನು ಮಾತನಾಡಿಸುತ್ತಿರುವುದೆಂದು ತಿಳಿಯಿತು.

"ನನ್ನನ್ನು ನೀವು ನೋಡಿರಲಿಕ್ಕಿಲ್ಲ. ನಾನು ಹಳ್ಳಿಯೂರಿನವ. ನೌಕರಿಯೇನಾದರೂ ದೊರೆಯಬಹುದೋ ಎಂದು ನೋಡಲು ಹೋಗುತ್ತೇನೆ. ತಮ್ಮ ವಿಷಯವೇನು?"

"ಹೋ ಭೇಷ್. ಮದ್ದಿನ ಬಳ್ಳಿಯನ್ನು ಅರಸಿಕೊಂಡು ಹೋಗುವಾಗ ಅದೇ ಬಳ್ಳಿ ಕಾಲಿಗೆ ತಗಲಿದಂತಾಯಿತು. ನಮ್ಮ ಕಂಪೆನಿಯಲ್ಲಿ ದುಡಿಯಲು ಜನ ಬೇಕಾಗಿದ್ದಾರೆ. ನಮ್ಮ ಕಂಪೆನಿಯವರಿಗೆ ಮಂಗಳೂರು ಕಡೆಯ ಮಂದಿಯ ಮೇಲೆ ಬಹಳ ವಿಶ್ವಾಸ. ಅದಕ್ಕಾಗಿ ನನ್ನನ್ನು ಇತ್ತಕಡೆ ಕಳು ಹಿಸಿದ್ದಾರೆ. ನಾನು ಬಂದವನು ಎಂಟು ದಿನ ನಿಮ್ಮ 'ವಿಷ್ಣುಭವನ'ದಲ್ಲಿದ್ದೆ. ಒಳ್ಳೆ ಊಟ ಕೊಡುತ್ತಾರಪ್ಪಾ ನಿಮ್ಮ ಉಡುಪಿ ಹೋಟೇಲಿನವರು. ನನಗೆ ಬಹಳ ಖುಶಿಯಾಯಿತು. ಎರಡು ವರ್ಷಕ್ಕೊಮ್ಮೆ ನಾನು ಈ ಕಡೆ ಬರುವು ದುಂಟು. ಬಂದಾಗಲೆಲ್ಲಾ ಅಲ್ಲಿಯೇ ಉಳಕೊಳ್ಳುತ್ತಿದ್ದೇನೆ. ಈ ಬಾರಿ ಎಂಟು ದಿನ ನಿಂತೆ. ಯೋಗ್ಯ ಉಮೇದ್ವಾರರು ಬೇಕಾಗಿದ್ದಾರೆಂದು ನಿಮ್ಮ ಊರಿನ ಪತ್ರಿಕೆಗಳಲ್ಲಿ ಜಾಹೀರಾತು ಕೊಟ್ಟಿದ್ದೆ. ಅದರಂತೆ ಇಪ್ಪತ್ತನಾಲ್ಕು ಮಂದಿ ಬಂದು ನನ್ನನ್ನು ಭೇಟಿ ಮಾಡಿದರು. ಅವರಲ್ಲಿ ಎಂಟು ಜನರ ವಿಳಾಸ ತೆಗೆದುಕೊಂಡು ಕಂಪೆನಿಗೆ ಶಿಫಾರಸು ಮಾಡಿದ್ದೇನೆ. ಉಳಿದವರನ್ನು ಬೇಡ ವೆಂದು ಬಿಟ್ಟುಬಿಟ್ಟೆ. ಕೆಲವರೆಲ್ಲಾ 'ಡೋಂಗಿ'ಗಳು ನೋಡಿ. ಅಂಥವರ ಮುಖನೋಡಿದೊಡನೆ ನಾನು ಪರೀಕ್ಷಿಸಿಬಿಡುತ್ತೇನೆ. ಅದಕ್ಕಾಗಿಯೇ ಕಂಪೆ ನಿಯವರು ಯಾರನ್ನಾದರೂ ಕೆಲಸಕ್ಕೆ ಆರಿಸುವಾಗ ನನ್ನನ್ನೇ ನೇಮಿಸಿಬಿಡು ತ್ತಾರೆ. ನಿಮ್ಮ ಊರಿನ ಎಷ್ಟು ಮಂದಿ ತರುಣರು ಈಗ ನಮ್ಮ ಕಂಪೆನಿಯಲ್ಲಿ ದುಡಿಯುತ್ತಿದ್ದಾರೆ. ಹೆಚ್ಚಾಗಿ ಎಲ್ಲರೂ ಪ್ರಾಮಾಣಿಕರು. ಆದ್ದರಿಂದಲೇ ನಿಮ್ಮ ಕಡೆ ಜನರ ಮೇಲೆ ಅಪಾರ ವಿಶ್ವಾಸ. ಮನುಷ್ಯನಲ್ಲಿ ಪ್ರಾಮಾಣಿಕತೆ ಬೇಕಾದುದು, ಉಳಿದ ಗುಣಗಳೆಲ್ಲಾ ಅಷ್ಟು ಪ್ರಾಮುಖ್ಯವಲ್ಲ. ನಿಮ್ಮನ್ನು ನೋಡಿದ ಕೂಡಲೆ ನನಗೆ ಸ್ವಾಭಾವಿಕ ಪ್ರೀತಿ ತೋರಿತು. ಅದಕ್ಕಾಗಿ ಆ ಮನುಷ್ಯನೊಡನೆ ನಿಮ್ಮ ಕುರಿತು ವಾದಿಸಿದೆ. ಇಲ್ಲವಾದರೆ ಬಸ್ಸು ಹತ್ತು ವಾಗ ಸ್ವಲ್ಪ ತಾಗಿಹೋದರೆ ಅದಕ್ಕೆಲ್ಲಾ ಅಷ್ಟು ರೇಗಿಕೊಂಡರೆ ಹೇಗೆ?" ಎಂದು ಮಾತಿನ ಮಧ್ಯೆ ತನ್ನ ಸಿಗರೇಟ್ ಪೆಟ್ಟಿಗೆಯನ್ನು ರಾಮಣ್ಣನ ಮುಂದೆ ಚಾಚಿದ. ರಾಮಣ್ಣ ವಿನಯದಿಂದ ತಾನು ಹೊಗೆಬತ್ತಿ ಸೇದುವುದಿಲ್ಲವೆಂದು ಹೇಳಿದ. ಕಷ್ಟಗಳ ಮಧ್ಯೆಯೂ ದೇವರು ಸ್ವಲ್ಪವಾದರೂ ಸುಖನೀಡುತ್ತಾ ರೆಂದು ಸಂತೋಷಪಟ್ಟ. ಈ ಹೊಸ ವ್ಯಕ್ತಿಯ ಪರಿಚಯವಾದುದರಿಂದ ತನಗೆ ಇನ್ನು ಹೆಚ್ಚಿನ ಭಯವಿಲ್ಲವೆಂದು ಸಮಾಧಾನ ಬಂತು ರಾಮಣ್ಣನಿಗೆ ಬಸ್ಸಿಗೆ ಟಿಕೇಟು ಪಡೆಯುವುದಕ್ಕಾಗಿ ತಾನು ಬಂದ ಕಷ್ಟವನ್ನು ಹೇಳಿಕೊಂಡು

ದಲ್ಲದೆ ತಾನು ಇಂತಹ ದೂರ ಪ್ರಯಾಣವನ್ನು ಇದರ ಮೊದಲು ಮಾಡಲಿಲ್ಲ ವೆಂದೂ, ಮುಂಬಯಿಯಂತಹ ದೊಡ್ಡ ನಗರಗಳಿಗೆ ತಾನು ತೀರಾ ಅಪರಿಚಿತ ನೆಂದೂ ನಿವೇದಿಸಿಕೊಂಡ.

ಇಷ್ಟರಲ್ಲಿ ಚಾರ್ವಾಡಿ ಗಡಿಯು ಮುಟ್ಟಿತು. ಅಲ್ಲಿ ಬಸ್ಸಿನ ಜನರಿಗೆಲ್ಲಾ ಒಂದರ್ಧತಾಸು ವಿರಾಮವಿದೆ. ಅಲ್ಲಿತನಕ ಒಂದು ಬಸ್ಸು ಅಲ್ಲಿಯೇ ನಿಲ್ಲುತ್ತದೆ. ಅನಂತರ ಓಡುವ ಇನ್ನೊಂದು ಬಸ್ಸು ಪ್ರಯಾಣಿಕರಿಗಾಗಿ ತಯಾರಾಗಿ ಕಾದಿರುತ್ತದೆ.

"ಇಲ್ಲಿ ಅರ್ಧತಾಸು ವಿರಾಮವಿದೆ. ಬನ್ನಿ—ಚಾ ತೆಕ್ಕೊಳ್ಳೋಣ"ವೆಂದು ಜತೆಯ ವ್ಯಕ್ತಿ ಆಹ್ವಾನಿಸಿದಂತೆ ರಾಮಣ್ಣನೂ ಪಕ್ಕದ ಫಲಾಹಾರ ಮಂದಿರಕ್ಕೆ ಹೋಗಿ ಕುಳಿತ. ರಾಮಣ್ಣ ತನ್ನ ಬೇಸರಗಳ ಮಧ್ಯೆ ಹಸಿವನ್ನೇ ಮರೆತಿದ್ದ. ಫಲಾಹಾರಮಾಡಿ ದುಡ್ಡು ಕೊಡುವುದಕ್ಕಾಗಿ ಮುಂದೆ ಹೋದಾಗ ಜತೆಯ ವ್ಯಕ್ತಿ ರಾಮಣ್ಣನನ್ನು ತಡೆದು ತಾನೇ ಇಬ್ಬರ ಹಣವನ್ನೂ ತೆತ್ತ. ರಾಮಣ್ಣ ತನ್ನ ಹಣದ ಚೀಲವನ್ನು ಕಿಸೆಯಲ್ಲಿ ತುರುಕಿಸಿಕೊಂಡ.

"ಹಾಗೆಲ್ಲಾ ಹಣದ ಚೀಲವನ್ನು ಅಜಾಗರೂಕತೆಯಿಂದ ಇಡಬಾರದು. ಈ ಊರುಗಳೆಲ್ಲಾ ನಿಮಗೆ ಗೊತ್ತಿಲ್ಲ. ಭಯಂಕರ ಜನರಿದ್ದಾರೆ" ಎಂದು ಹೇಳಿ ರಾಮಣ್ಣನ ಹಣದ ಚೀಲವನ್ನು ಒಳಅಂಗಿಯ ಕಿಸೆಯಲ್ಲಿ ಇಡುವಂತೆ ಎಚ್ಚರಿಸಿದ.

ಇನ್ನೊಮ್ಮೆ ಬಸ್ಸು ನಿಲ್ಲುವ ಸ್ಥಳದಲ್ಲಿ ಎರಡು ಡಜನ್ ಕಿತ್ತಳೆ ಹಣ್ಣುಗಳನ್ನು ರಾಮಣ್ಣ ತೆಗೆದು ಎರಡುಪಾಲು ಮಾಡಿ ಒಂದು ಪಾಲು ಜತೆಯ ವ್ಯಕ್ತಿಯ ಕೈಗಿತ್ತ.

"ಸ್ವಲ್ಪ ಇಂಗ್ಲಿಷ್ ಗೊತ್ತಿದ್ದರಾಯಿತು. ಮತ್ತೆ ತನ್ನಷ್ಟಕ್ಕೆ ಅಭ್ಯಾಸವಾಗುತ್ತದೆ. ನೌಕರಿಯ ವಿಷಯದಲ್ಲಿಯೂ ಇನ್ನು ಯೋಚನೆ ಬೇಡ. ನಿಮಗೆ ಹೊಸ ಕೊಠಡಿ ಉಳಕೊಳ್ಳಲು ದೊರೆಯುವ ತನಕ ನೀವು ನಮ್ಮ ಮನೆಯಲ್ಲಿಯೇ ಇದ್ದುಕೊಳ್ಳಿರಿ. ನೂರಮೂವತ್ತು ರೂಪಾಯಿ ತನಕ ಪಗಾರ ದೊರೆಯುತ್ತದೆ. ನೂರು ಖರ್ಚಿಗೆ ಸಾಕು. ನಿಮಗೆಲ್ಲಾ ಸಿಗರೇಟು ಸೇದುವ ದುರಭ್ಯಾಸವಿಲ್ಲ. ನನಗೆ ನೋಡಿ ತಿಂಗಳಿಗೆ ಐವತ್ತು ರೂಪಾಯಿ ಸಿಗರೇಟಿಗೇ ಬೇಕು. ಆಂ, ಮರೆತೆ. ನಾವಿಷ್ಟು ಮಿತ್ರರಾಗಿಯೂ ನಿಮ್ಮ ಹೆಸರು ಕೇಳಲು ಮರೆತೆ."

"ರಾಮಣ್ಣ"ನೆಂದು ನನ್ನ ಹೆಸರು.

"ಮಿಸ್ಟರ್ ರಾಮಣ್ಣ. ಗುಡ್. ನಮ್ಮ ಕಂಪೆನಿಯಲ್ಲಿಯೂ ಮೈಸೂರು ಕಡೆಯವರು ನಿಮ್ಮ ಹೆಸರಿನವರು ಇದ್ದಾರೆ. ನನ್ನ ನೆನಪಿನಂತೆ ಮಿಸ್ಟರ್ ರಾಮಚಂದ್ರ ರಾವ್ ಒಬ್ಬರು. ನೋಡಿ ಅವರೆಲ್ಲರ ಒಡನಾಟದಲ್ಲಿ ಕನ್ನಡ ಚೆನ್ನಾಗಿ ಮಾತನಾಡಲು ಕಲಿತುಬಿಟ್ಟೆ. ನನ್ನ ಸ್ವಂತ ಊರೇ ಮುಂಬಯಿ. ಹುಟ್ಟಿದ್ದು, ಬೆಳೆದದ್ದೂ ಎಲ್ಲಾ ಅಲ್ಲೇ. ಮಿಸ್ಟರ್ ತ್ಯಾಗಿ ಎಂದು ನನ್ನ ಹೆಸರು."

ಎದುರಿನ ಹೆಂಗಸರ ಸೀಟಿನಲ್ಲಿ ಹೆಣ್ಣು ಮಗುವೊಂದು ರಂಭಾಟವೆಬ್ಬಿಸುತ್ತಲಿತ್ತು. ತಾಯಿ ಎಷ್ಟು ಸಲ ಅಂಗಿಹಾಕಿದರೂ ಮರುಕ್ಷಣದಲ್ಲಿಯೇ ಅದನ್ನು ಎಳೆದು ಬಿಸುಟುತಿತ್ತು. ರಾಮಣ್ಣನ ದೃಷ್ಟಿ ಅತ್ತ ತಿರುಗಿತು. ಹೊಸ ಅಂಗಿಹಾಕದ ಸಿಟ್ಟಿನಿಂದ ನೆಲದಮೇಲೆ ಅಂಗಿಹಾಕದೆ ಮಲಗಿಕೊಂಡ ತನ್ನ ಮಗು ಸುಸೀಲಾನ ನೆನಪಾಗಿಕೊಂಡಿತು. ಹೃದಯ ಅಯ್ಯೋ ಎಂದುಕೊಂಡಿತು. ರಾಮಣ್ಣ ಮಗುವಿನ ಕೈಗೊಂದು ಕಿತ್ತಳೆಹಣ್ಣು ತುರುಕಿಸಿದ. ಮಗುವಿನ ಅಳು ನಿಂತಿತು.

"ನಿಮಗೆ ಮದುವೆಯಾಗಿದೆಯೇ? ಮಕ್ಕಳೆಷ್ಟು ಮಿಸ್ಟರ್ ರಾಮಣ್ಣ? ನನಗೆ ಐದು ವರ್ಷಗಳ ಹಿಂದೆ ಮದುವೆ ಆದದ್ದು, ನಮ್ಮದು ಪ್ರೇಮ ವಿವಾಹ ಅವಳ ರಕ್ಷಕರೂ ನನ್ನ ರಕ್ಷಕರೂ ಆಕ್ಷೇಪವೆತ್ತಿದರು. ನಾವು ಯಾರನ್ನೂ ಲಕ್ಷಿಸಲಿಲ್ಲ. ರಿಕಾರ್ಡು ಮೂಲಕ ಮದುವೆ ಮಾಡಿಕೊಂಡೆವು. ಮೂರು ವರ್ಷದ ಹೆಣ್ಣುಮಗು ಇದೆ. 'ನೀನಾ' ಎಂದು ಹೆಸರಿಟ್ಟಿದ್ದೇವೆ. ಕೊಂಡಾಟವಾಗಿದ್ದಾಳೆ. ನಾನು ಯಾವಾಗ ಬರುವೆನೋ ಎಂದು ಕಾಯುತ್ತಿರಬಹುದು. ಮಂಗಳೂರಿನಿಂದ ಬರುವಾಗ ತರತರದ ಅಂಗಿ, ಸಿಹಿ ತಿಂಡಿಗಳನ್ನೆಲ್ಲಾ ತರಬೇಕೆಂದು ಕಾಡಿದ್ದಾಳೆ. ಇನ್ನು ಹೋಗಿ ಅವಳನ್ನು ಎದುರಿಸಲಿಕ್ಕೇನೇ ಭಯವಾಗುತ್ತಿದೆ."

ಈಗ ರಾಮಣ್ಣನ ಸರದಿ. ಪರಿಸ್ಥಿತಿ ವಿಪರೀತಕ್ಕೆ ಮುಟ್ಟಿಹೋಯಿತು. ರಾಮಣ್ಣನೀಗ ತನ್ನ ಹೆಂಡತಿ ನಾಗಿ, ಮಗು ಸುಸೀ ಇವರ ಕುರಿತಾಗಿ ಹೇಳಬೇಕು. ರಾಮಣ್ಣ ಉಪಾಯ ಕಾಣದಾದ. ಬಸ್ಸು ಓಡುವ ಮಾರ್ಗದ ಪಕ್ಕದಲ್ಲೇ ಒಂದು ದೃಶ್ಯ ಅತನ ಕಣ್ಣಿಗೆ ಬಿತ್ತು. ದೊಡ್ಡ ಕೋಣವೊಂದು ಸತ್ತು ಬಿದ್ದಿತ್ತು. ಹದ್ದುಗಳು ಸಾಲಾಗಿ ಮಾಂಸ ತಿನ್ನುವುದಕ್ಕಾಗಿ ಕುಳಿತಿದ್ದುವು. ರಾಮಣ್ಣ "ಓ ಅಲ್ಲಿ ನೋಡಿ ........ ಹದ್ದುಗಳೆಷ್ಟು ಬಂದು ಸೇರಿವೆ? ಓ ಅಲ್ಲಿ" ಎಂದು ತನ್ನ ಸ್ನೇಹಿತನ ಗಮನವನ್ನು ಅತ್ತ ತಿರುಗಿಸಿದ.

## 21

ಕಡೂರಿನಲ್ಲಿ ಬಸ್ಸು ನಿಂತಿತು. ಸಾಮಾನು ಹೊರಲು ನಾ ಮುಂದೆ ತಾ ಮುಂದೆ ಎಂದು ಕೂಲಿ ಹುಡುಗರು ಸಜ್ಜಾಗಿ ನಿಂತಿದ್ದರು. ಕಡೂರಿನ ಕೂಲಿ ಹುಡುಗರು ಹೆಸರು ಹೋದವರು. ಸಾಮಾನು ಹೊರುವಾಗ ಇಂತಿಷ್ಟೆ ಕೂಲಿ ಎಂದು ನಿಶ್ಚಯಿಸದೆ ಅವರ ತಲೆಗೆ ಕಟ್ಟು ಹೊರಿಸಿದರೆ ಮತ್ತೆ ಪ್ರಯಾಣಿಕರ ಪ್ರಾಣವೇ ಹಿಂಡಿಬಿಡುತ್ತಾರೆ.

ರಾಮಣ್ಣನಲ್ಲಿ ಕಟ್ಟುಗಳೇನೂ ಇಲ್ಲ. ಉಟ್ಟ ವಸ್ತ್ರಗಳಲ್ಲೇ ಇಲ್ಲಿ ತನಕ ಬಂದಿದ್ದಾನೆ. ಒಂದೆರಡು ಉಡುಪುಗಳು ಮಾತ್ರ ಒಂದು ಚೀಲದಲ್ಲಿ ತುಂಬಿಸಿ ಕೈಯಲ್ಲಿ ಹಿಡಿದುಕೊಂಡಿದ್ದಾನೆ. ರಾಮಣ್ಣನ ಸ್ನೇಹಿತನಲ್ಲಿಯೂ ವಿಶೇಷ ಕಟ್ಟುಗಳೇನೂ ಇಲ್ಲ. ಒಂದು ಚರ್ಮದ ಚೀಲ ಒಂದು ಕೊಡೆ ಇಷ್ಟೆ.

ಬಸ್ ನಿಲ್ದಾಣಕ್ಕಿಂತಲೂ ಹೆಚ್ಚು ಜನಸಂದಣಿ ರೈಲು ನಿಲ್ದಾಣದಲ್ಲಿ. ಟಿಕೇಟು ತೆಗೆಯುವಲ್ಲಿ ಜನರ ತಿಕ್ಕಾಟ ನೋಡಬೇಕಿತ್ತು. ಬೆಲ್ಲದ ಮೇಲೆ ಇರುವೆ ಸಾಲುಗಳು ಬಂದು ಬಿದ್ದಹಾಗೆ ಮುತ್ತಿಗೆ ಹಾಕಿದ್ದರು.

"ನೀವಿಲ್ಲೇ ನಿಲ್ಲಿರಿ, ಮಿಸ್ಟರ್ ರಾಮಣ್ಣ. ಸ್ಟೇಶನ್ ಮಾಸ್ತರರು ನನ್ನ ಸ್ನೇಹಿತರು. ನಮಗಿಬ್ಬರಿಗೂ ಮುಂಬಯಿಗೆ ಟಿಕೇಟು ತೆಗೆದುಕೊಂಡು ಬರುತ್ತೇನೆ. ಇಲ್ಲಿ ಹೊರಗಿನಿಂದ ಟಿಕೇಟಿಗೆ ನಿಂತರೆ ಪ್ರಯೋಜನವಿಲ್ಲ", ಎನ್ನುತ್ತಾ ರಾಮಣ್ಣನ ಮಿತ್ರ ಹೋಗಲು ತೊಡಗಿದ. ರಾಮಣ್ಣ ಹಣದ ಪಕೇಟು ತೆಗೆದು, "ನಿಲ್ಲಿರಿ; ನನ್ನ ಟಿಕೇಟಿನ ಹಣ. . . ." ಎಂದು ಪಕೇಟಿನಿಂದ ಹಣ ತೆಗೆದುಕೊಟ್ಟ.

"ಪರವಾ ಇಲ್ಲರೀ. ಇಬ್ಬರಿಗೂ ತೆಗೆಯುತ್ತೇನೆ. ರೈಲಿನಲ್ಲಿ ಕುಳಿತು ಲೆಕ್ಕಮಾಡಿ ತೆಗೆದುಕೊಳ್ಳುವೆನಂತೆ. ಅದರೆಲ್ಲೇನಿದೆ?" ಎಂದು ನಡೆದೇಬಿಟ್ಟ.

ರಾಮಣ್ಣ ಪ್ಲೇಟ್‌ಫಾರ್ಮಿನ ಪಕ್ಕದಲ್ಲಿ ನಿಂತುಕೊಂಡ. ಒಂದು ನಿಮಿಷ ಕಳೆದೊಡನೆ ರಾಮಣ್ಣ ಮಿತ್ರ ಪುನಃ ಬಂದ. ನೂರು ರೂಪಾಯಿಯ ಒಂದು ನೋಟನ್ನು ತೋರಿಸಿ, "ಅಲ್ಲಿ, ಚಿಲ್ಲರೆಯಿಲ್ಲವಂತೆ. ಎಂತಹ ಜನರೆಲ್ಲ? ಎಲ್ಲರೂ ಇಡೀ ಇಡೀ ನೋಟನ್ನೇ ನೀಡುವವರು. ಪಾಪ, ಸ್ಟೇಶನ್ ಮಾಸ್ತರರಿಗೆ ಚಿಲ್ಲರೆ ಕೊಟ್ಟುಕೊಟ್ಟು ಸಾಕಾಯಿತಂತೆ. ಇಗೊಳ್ಳಿ, ಈ ನೂರು ರೂಪಾಯಿಯ ನೋಟು ನಿಮ್ಮಲ್ಲಿರಲಿ. ನಿಮ್ಮಲ್ಲಿ ಚಿಲ್ಲರೆ ನೋಟುಗಳಿದ್ದರೆ ಕೊಡಿರಿ. ನಮಗೆ ಬೊಂಬ್ಯಾಗೆ ಎರಡು ಟಿಕೇಟುಗಳಿಗೆ ಬೇಕಾಗುವಷ್ಟು. . . .

ಸಾಧಾರಣ 50 ರೂಪಾಯಿ ಕೊಡಿರಿ. ಮತ್ತೆ ಸರಿಮಾಡಿಕೊಳ್ಳೋಣ. ಆಂ . . . . ರೈಲು ಸಿಗ್ನಲ್ ಆಗಿಬಿಟ್ಟಿತು."

ರಾಮಣ್ಣ ಅವಸರವಸರವಾಗಿ ಎಣಿಸಿ, ಐವತ್ತು ರೂಪಾಯಿ ಸ್ನೇಹಿತನಲ್ಲಿ ಕೊಟ್ಟ. ನೂರು ರೂಪಾಯಿ ನೋಟನ್ನು ತಾನು ತೆಗೆದುಕೊಳ್ಳದೆ, ಅದು ಸ್ನೇಹಿತನ ಕೈಯಲ್ಲೇ ಇರಲೆಂದು ಹೇಳಿ, ಅವನನ್ನು ಟಿಕೇಟು ತರಲು ಕಳುಹಿಸಿದ. ರಾಮಣ್ಣನಿಗೇನು ಸ್ನೇಹಿತನಲ್ಲಿ ಅಷ್ಟು ವಿಶ್ವಾಸವಿಲ್ಲವೆ?

ರಾಮಣ್ಣನ ದೃಷ್ಟಿಯಲ್ಲಿ, ಲೋಕದಲ್ಲಿ ವೆಂಕಟೇಶ ಕವ್ತಿಯವರಿದ್ದರೆ, ಇಂತಹ ಪೇಟೆಗಳಲ್ಲಿ ಲೆಕ್ಕಣಿಕೆಗೆ ಸಿಗದಷ್ಟು ಸಾವಿರಾರು ಮಂದಿ ವೆಂಕಟೇಶ ಕವ್ತಿಗಳಿರುವುದು ಅವನಿಗೆ ಗೊತ್ತೇ ಇರಲಿಲ್ಲ. ಟಿಕೇಟು ತರಲು ಹೋದ ಮಿತ್ರ ಮತ್ತೆ ಮರಳಲೇ ಇಲ್ಲ. ರಾಮಣ್ಣನಿಗೆ ಕಾದುಕಾದು ಸಾಕಾಯಿತು. ರೈಲು ಬಂದಿತು. ಜನರನ್ನೆಲ್ಲಾ ತುಂಬಿಸಿಕೊಂಡು ಹೋಯಿತು. ಪ್ಲೇಟ್ ಫಾರ್ಮಿನಲ್ಲಿ ರಾಮಣ್ಣನೊಬ್ಬನೇ ಉಳಿದುಕೊಂಡ. ಸ್ವಲ್ಪ ಹೊತ್ತಿನ ಹಿಂದೆ ಅಷ್ಟು ಜನಜಂಗುಳಿಯಿಂದ ತುಂಬಿ, ಜಾತ್ರೆಯ ಬಯಲಿನಂತಿದ್ದ ರೈಲ್ವೆ ನಿಲ್ದಾಣ, ಈಗ ಸದ್ದಿಲ್ಲದೆ, ಯಾರೂ ಇಲ್ಲದೆ ಸ್ಮಶಾನದಂತೆ ಇದೆ. ಜನರು ವೀಳ್ಯದೆಲೆ ತಿಂದು ಉಗುಳಿದ ಎಂಜಲು, ಹಣ್ಣು ತಿಂದು ಬಿಸುಟ ಸಿಪ್ಪೆ, ಹೊಗೆ ಬತ್ತಿ ಸೇದಿ ಎಸೆದ ತುಂಡುಗಳು, ಇವುಗಳನ್ನು ಬಿಟ್ಟರೆ, ಅಲ್ಲಿರುವವನು ರಾಮಣ್ಣನೊಬ್ಬನೆ. ಅವನಿಗೆ ಅತೀವ ದುಃಖವಾಯಿತು. ಸ್ಟೇಶನಿನ ಕಚೇರಿಯಲ್ಲಿ ಮಾಸ್ತರರು ಇನ್ನೂ ಇದ್ದರು. ರಾಮಣ್ಣನು ಧೈರ್ಯಮಾಡಿಕೊಂಡು ಅವರಲ್ಲೇ ವಿಚಾರಿಸುವೆನೆಂದು ಹೋದ.

"ಅವರು ಹೋದರೆ?"

"ಯಾರು?"

ಆ ಬೊಂಬಾಯಿಯ ಕಂಪೆನಿಯವರು—ಮಂಗಳೂರಿಗೆ ಉಮೇದ್ವಾರರನ್ನು ಆರಿಸಲು ಹೋದವರು—ಆಗ ಎರಡು ಟಿಕೇಟು ಪಡೆಯಲು ಬಂದವರು—ನಿಮ್ಮ ಮಿತ್ರರು!"

"ನನ್ನ ಮಿತ್ರರೂ ಇಲ್ಲ; ಬೊಂಬಾಯಿಯ ಕಂಪೆನಿಯವರೂ ಇಲ್ಲ. ನಿನಗೇನೋ ತಲೆ ಹಾಳಾಗಿದೆ."

ರಾಮಣ್ಣನಿಗೆ ದಿಗಿಲುಂಟಾಯಿತು. ತಾನು ಎಂತಹ ಕೆಟ್ಟ ಸಮಯದಲ್ಲಿ ಮನೆಬಿಟ್ಟೆನೆಂದು ಶಪಿಸಿಕೊಂಡ.

ಬೊಂಬಾಯಿ ಕಡೆ ಹೋಗುವ ಮುಂದಿನ ರೈಲು ಇನ್ನು ರಾತ್ರೆ ಹನ್ನೆರಡು ಗಂಟೆಗೆ ಎಂದು ತಿಳಿಯಿತು. ಆ ಕಡೆ ಬೆಂಗಳೂರು—ಈ ಕಡೆ ಮುಂಬಯಿ; ಯಾವ ಕಡೆ ಹೋಗೋಣ ಎಂದು ಯೋಚನೆಮಾಡಿದ ರಾಮಣ್ಣ. ಮುಂಬಯಿಯೇ ಆತನ ಮನಸ್ಸನ್ನು ಸೆಳೆಯುತಿತ್ತು. ಆದರೆ ಈಗ ಸ್ವಲ್ಪ ಸಮಯದ ಹಿಂದೆ ನಡೆದ ಘಟನೆ ಆತನಿಗೆ ಆಗಾಗ ಭಯವನ್ನುಂಟುಮಾಡುತಿತ್ತು. ಮುಂಬಯಿಯಲ್ಲಿ ಹೆಚ್ಚಿನವರು ಇದೇ ರೀತಿ ಮಾಡುವವರಾದರೆ, ರಾಮಣ್ಣನ ಪಾಡೇನು? ಹೊರತು ರಾಮಣ್ಣನಲ್ಲಿದ್ದ ಹಣದಲ್ಲಿ ಈಗಾಗಲೇ ಅರುವತ್ತು ರೂಪಾಯಿಗಳು ಕಡಿಮೆಯಾದುವು. ಉಳಿದ ಹಣದಲ್ಲಿಯೂ ಹೆಚ್ಚಿನಂಶವನ್ನು ರೈಲಿಗೇ ಕೊಟ್ಟರೆ ಉಳಿಗಾಲವೆಲ್ಲಿ? ರಾಮಣ್ಣ ಕಂಪೆನಿಯ ಠಕಾರಿ ಸ್ನೇಹಿತನೊಡನೆ ಸೋತುಹೋದರೂ, ಏನನ್ನೂ ತಿಳಿಯದ ಹೆಡ್ಡನಲ್ಲ. ಮುಂಬಯಿಯಷ್ಟು ದೊಡ್ಡದಲ್ಲವಾದರೂ, ಬಹೂ ಪ್ರಧಾನವಾದ ನಗರ ಪುಣೆ. ಅಲ್ಲಿಗೆ ಮೊದಲು ಹೋಗಿ ನೋಡುವೆನೆಂದು ರಾಮಣ್ಣ ಎಣಿಸಿಕೊಂಡು ಪುಣೆಗೆ ಟಿಕೇಟು ತೆಗೆದು ಮಧ್ಯರಾತ್ರೆಯ ರೈಲು ಹತ್ತಿದ.

ರೈಲಿನಲ್ಲಿ ಪ್ರಯಾಣ ಮಾಡುತಿದ್ದಂತೆ ಜನ ಜೀವನದ ಅನೇಕ ವೈವಿಧ್ಯತೆಗಳನ್ನು ರಾಮಣ್ಣ ಕಂಡನು. ಆತನು ಕುಳಿತಲ್ಲೆ ಕುಳಿತುಕೊಂಡು ಯಾರೊಡನೆಯೂ ಹೆಚ್ಚಾಗಿ ಸಂಭಾಷಣೆ ಮಾಡದೆ ಸುಮ್ಮನಿದ್ದರೂ ಆತನನ್ನು ಮಾತನಾಡಿಸುವವರು ಹಲವರಿದ್ದರು. ಕುಳಿತುಕೊಳ್ಳುವ ಸ್ಥಳಕ್ಕಾಗಿ ಎಷ್ಟೋ ಕಡೆ ಜಗಳವೂ ಕೆಲವು ಕಡೆ ಶಕ್ತಿಪ್ರದರ್ಶನವೂ ಆಗುತ್ತಲಿತ್ತು. ಎಲ್ಲವನ್ನೂ ತುಂಬುಕಣ್ಣಿಂದ ನೋಡುತ್ತಾ ರಾಮಣ್ಣ ರೈಲಿನಲ್ಲಿ ಸಮಯ ಕಳೆಯುತಿದ್ದ.

ಬಿಕ್ಕೆ ಬೇಡುವ ಎರಡು ಹುಡುಗರು ರೈಲು ಹತ್ತಿದರು. ಸರ್ಕಸ್ ಕಂಪೆನಿಯಲ್ಲಿ ದುಡಿಯುತಿದ್ದ ತಮ್ಮ ತಂದೆ ಸರ್ಕಸ್ ಪ್ರದರ್ಶನ ಕಾಲದಲ್ಲಿ ಭಯಂಕರವಾದ ಅವಘಡಕ್ಕೆ ಸಿಲುಕಿ ತೀರಿಹೋದ ಅನಂತರ ತಾವು ಅನಾಥರಾಗಿ ಬಿಕ್ಕೆ ಬೇಡಲಾಯಿತೆಂದು ಜನರ ಮುಂದೆ ಕೈ ಮುಗಿದು ಪ್ರಾರ್ಥಿಸಿಕೊಂಡರು. ರಾಮಣ್ಣನ ಎದೆ ಹೊಡೆದುಹೋಗುವಷ್ಟು ದುಃಖವಾಯಿತು. ತನ್ನ ಮಗು ಸುಶೀಲಾನಿಗೆ ಇದೇ ಗತಿಯಾದರೆ? ಈ ಮಕ್ಕಳ ತಂದೆ ಅವಘಡದಲ್ಲಿ ಸಿಲುಕಿ ಇವರು ಅನಾಥರಾದರು. ತಾನಾದರೋ ಜೀವಿಸಿ ತನ್ನ ಮಗುವನ್ನು ಅನಾಥೆಯನ್ನಾಗಿ ಮಾಡಿದೆ. ರಾಮಣ್ಣ ಸೈರಿಸಿಕೊಂಡ. ಇತರರೊಡನೆ ತಾನೂ ಒಂದು ಅರ್ಧಾಣೆಯನ್ನು ಆ ಮಕ್ಕಳ ಕೈಗಿತ್ತ. ಮುಂದಿನ ಸ್ಟೇಶನಿ

ನಲ್ಲಿ ಇನ್ನೊಂದು ಹೃದಯ ವಿದ್ರಾವಕ ಸನ್ನಿವೇಶ. ನಡುಪ್ರಾಯದವಳಾಗಿದ್ದರೂ, ಬಡತನ ಹಸಿವುಗಳಿಂದ ಸೊರಗಿ ಕೃಶವಾಗಿದ್ದ ಹೆಣ್ಣು ಜೀವವೊಂದು ಕಂಕುಳಲ್ಲಿ ಪುಟ್ಟ ಶಿಶುವನ್ನೆತ್ತಿಕೊಂಡು ರೈಲು ಹತ್ತಿತು. ಹರಕು ಹರಕು ಸೀರೆ, ಗಾಳಿಯೊಡನೆ ಹಾರಾಡುತಿದ್ದ ಕೇಶರಾಶಿಗಳು, ಹಸಿವಿನಿಂದ ಕಾಡುವ ಮಗುವಿನ ಬೆನ್ನುತಟ್ಟಿ ಆಗಾಗ ಸಮಾಧಾನ ಪಡಿಸುತಿದ್ದ ಆ ತಾಯಿ ಭಿಕ್ಷೆಗಾಗಿ ಬಂದು ನಿಂತಳು. ಮದುವೆಯಾಗಿ ಸಂಸಾರ ಮಾಡಿಕೊಂಡಿದ್ದ ಹೆಂಗುಸಾಗಿದ್ದಿರಬಹುದು ಈಕೆ! ಮಗುವಿದೆ. ಯಾವನೋ ಹುತಾತ್ಮ ಸಂಸಾರದ ಕಷ್ಟ ಕಾರ್ಪಣ್ಯಗಳಿಗೆ ಅಂಜಿ ಹೆಡ್ಡನಂತೆ ಈಕೆಯನ್ನು ಅರ್ಧ ದಾರಿಯಲ್ಲಿ ಕೈಬಿಟ್ಟು ನಿರ್ಗತಿಕಳನ್ನಾಗಿ ಮಾಡಿರಬಹುದೇ? ರಾಮಣ್ಣನ ತಲೆಯಲ್ಲಿ ಯೋಚನೆಗಳೇ ಯೋಚನೆಗಳು. ತನ್ನ ಈ ಅಚಾತುರ್ಯ ಕೃತ್ಯದಿಂದ ಮುಂದೆ ನಾಗಿಯೂ ಇದೇ ರೀತಿಯಾಗಿ ಮಗುವನ್ನೆತ್ತಿಕೊಂಡು ಭಿಕ್ಷೆಬೇಡಲು ಹೋಗುತ್ತಿರಬಹುದೇ? ಎಂದು ಸಂಶಯ ತಾಳಿದ. ಅಯ್ಯೋ! ಹಾಗಿದ್ದರೆ ತಾನೆಂತಹ ದುರಾತ್ಮ? ಪಾಪಿ, ಎಂದು ಶಪಿಸಿಕೊಂಡ. ಒಡನೆ ತಾನು ಯಾತಕ್ಕಾಗಿ ಮನೆಬಿಟ್ಟು ಹೀಗೆ ಹೊರಟೆನೋ ಆ ಸನ್ನಿವೇಶಗಳೆಲ್ಲಾ ಅವನ ಕಣ್ಣಮುಂದೆ ಬಂದು ನಿಲ್ಲತೊಡಗಿದುವು. ನಾಗಿ ಹೆಣೆದ ಬೀಸಣಿಗೆ ಧನಿಯ ಕೈಯಲ್ಲಿ— ಧನಿ ತೆಗೆದ ಸೀರೆ ನಾಗಿಯ ಪೆಟ್ಟಿಗೆಯಲ್ಲಿ ಹೇಗೆ ಬಂತು? ಭಾಗೀರಥಿ ಹೇಳಿದ ಮಾತು ನಿಜವಾಗಿರಬಹುದೆ? ಗಾಳಿ ಬಾರದೆ ಎಲೆ ಅಲ್ಲಾಡಬಹುದೇ? ಇವೆಲ್ಲಾ ಪ್ರಶ್ನೆಗಳಿಗೆ ರಾಮಣ್ಣನಿಗೆ ಉತ್ತರಬೇಕಾಗಿದ್ದಿತು. ಒಮ್ಮೊಮ್ಮೆ ನಾಗಿ ನಿರಪರಾಧಿನಿಯಾಗಿದ್ದಿರಬಹುದೇ ಎಂಬ ಸಣ್ಣ ಸಂದೇಹ ಮೂಡಿ ಮರು ಗಳಿಗೆಯಲ್ಲೇ ಮಾಯವಾಗುತಿತ್ತು. ನಾಗಿ ತನಗೆ ದ್ರೋಹ ಮಾಡಿದ್ದರೆ ಈ ಬಡ ಭಿಕ್ಷುಕಿಯಂತಲ್ಲ ಇದಕ್ಕಿಂತಲೂ ಕಠಿಣವಾದ ಕಷ್ಟ ಆಕೆಗೆ ದೊರೆಯಲಿ ಎಂದು ಪ್ರಾರ್ಥಿಸಿಕೊಂಡು ಸುಮ್ಮನಾದ.

---

## 22

ಪುಣೆ ಸ್ಟೇಶನಿನಲ್ಲಿ ರಾಮಣ್ಣ ಇಳಿದುಕೊಂಡ. ರಾಮಣ್ಣನಿಗೆ ಮುಂದೆ ತಾನೆಲ್ಲಿ ಹೋಗಬೇಕೆಂದೇ ತಿಳಿದಿಲ್ಲ. ತನಗೆ ನಗರದ ಪರಿಚಯವೂ ಇಲ್ಲ, ದಾರಿಯೂ ಸರಿಯಾಗಿ ಗೊತ್ತಿಲ್ಲ. ಅದಕ್ಕಾಗಿ ಯಾರ ಸ್ನೇಹವನ್ನೂ ಬೆಳೆಸುವ ಗೋಜಿಗೆ ರಾಮಣ್ಣ ಹೋಗಲಿಲ್ಲ. ತನಗೆ ನೌಕರಿ ಬೇಕು. ಯಾವ ನೌಕರಿ

ಯಾದರೂ ಪರವಾ ಇಲ್ಲ. ಜೀವನ ಹೋದರೆ ಸಾಕು. ರಾಮಣ್ಣ ನಗರದ ಬೀದಿಗಳಲ್ಲಿ ನಡೆದ.

ಪುಣೆಯ ನಿಸರ್ಗ ಸೌಂದರ್ಯ ಪ್ರವಾಸಿಕರಿಗೆ ತುಂಬಾ ಸಂತೋಷ ವನ್ನೀಯಬಹುದು. ನಗರ ಬಿಟ್ಟು ದೂರ ಹೋದರೆ ದೊಡ್ಡ ದೊಡ್ಡ ಬೆಟ್ಟ ಗಳು. ಶಿವಾಜಿ ಮಹಾಪ್ರಭುವಿನ ಸಾಹಸಮಯ ಜೀವನಚರಿತ್ರೆಯನ್ನು ರಾಮಣ್ಣ ಸಾಲೆಯಲ್ಲಿ ಓದಿದ್ದಾನೆ. ಅವನ ಕಾಲದ ಐತಿಹಾಸಿಕ ಘಟನೆಗಳಿಗೆ ಪುಣೆ ನಗರದ ಸುತ್ತುಮುತ್ತಲೂ ಈಗ ಹಾಳುಬಿದ್ದಿರುವ ಕೋಟೆಕೊತ್ತಳಗಳು ಸಕ್ಕಿನುಡಿಯಬಹುದು. ಮುಂಬಯಿಯ ಪಾರ್ಸಿ, ಮಾರ್ವಾಡಿ ವರ್ತಕ ರೆಷ್ಟೋ ಮಂದಿ ಆಸ್ತಿ ತೆಗೆದುಕೊಂಡು ಸುಖಮಯ ಜೀವನ ನಡೆಸುತಿದ್ದಾರೆ. ವಾರದ ಕೊನೆಯ ರಜಾದಿನಗಳನ್ನು ಕಳೆಯಲಿಕ್ಕಾಗಿ ದೂರದ ಪ್ರವಾಸಿಕರ ಗುಂಪುಗಳೆಷ್ಟೋ ಅಲ್ಲಿ ಬರುತ್ತವೆ.

ರಾಮಣ್ಣ ಹಾಗೇನೂ ಬಂದವನಲ್ಲ. ಸುಖಮಯ ಜೀವನ ಆತ ಬಯಸಿಲ್ಲ. ಹೊಟ್ಟೆ ತುಂಬಿಸಿಕೊಂಡು ಬದುಕಿಕೊಳ್ಳುವ ಒಂದು ನೌಕರಿ ಗಾಗಿ ರಾಮಣ್ಣ ನಗರವಿಡೀ ಅಲೆದಾಡುತಿದ್ದಾನೆ. ನೌಕರಿ ಇಲ್ಲ. ಇದ್ದರೂ ಮರಾಠಿ ಗೊತ್ತಿರಬೇಕು. ರಾಮಣ್ಣ ಸೋತು ಸುಣ್ಣವಾದ. ರೈಲು ಪ್ಲೇಟ್ ಫಾರ್ಮುಗಳಲ್ಲಿ, ಮಾರ್ಗಗಳ ಅಂಚಿನಲ್ಲಿ ಮಲಗಿ ರಾತ್ರೆ ಕಳೆಯುವುದು. ಹಗಲಾದೊಡನೆ ನೌಕರಿಗಾಗಿ ಅಲೆಯುವುದು. ಹೀಗೆ ನಾಲ್ಕಾರು ದಿನಗಳು ಕಳೆದುವು. ರಾಮಣ್ಣನಿಗೆ ದಿಗಿಲುಂಟಾಗುತಿತ್ತು.

ಸಿನೆಮಾ ಮಂದಿರದಲ್ಲಿ ಕಸಗುಡಿಸುವ ಕೆಲಸವೊಂದು ದೊರೆಯಿತು. ತಿಂಗಳಿಗೆ ಹದಿನೈದು ರೂಪಾಯಿ ಪಗಾರ. ಅದರಲ್ಲಿ ರಾಮಣ್ಣನ ಸಕಲ ಖರ್ಚುಗಳೂ ಹೋಗಬೇಕು. ನುತ್ತೇನು ಮಾಡಬಹುದು? ಪಗಾರವೆಷ್ಟಾ ದರೂ ಪರವಾ ಇಲ್ಲ. ಸ್ವಲ್ಪ ದಿನ ಕಳೆದು ಮತ್ತೆಲ್ಲಿಯಾದರೂ ಬೇರೆ ಕೆಲಸ ದೊರೆತರೆ ಸೇರಿಕೊಳ್ಳಬಹುದೆಂದು ಎಣಿಸಿ ರಾಮಣ್ಣ ಒಪ್ಪಿಕೊಂಡ. ಆ ಹಿಡಿ ಸೂಡಿ ಹಿಡಿದು ಸಿನಿಮಾ ಮಂದಿರದ ನೆಲವನ್ನು ಗುಡಿಸುವ ಪ್ರಥಮ ದಿನ ರಾಮಣ್ಣನ ಕಂಠ ಬಿಗಿದು ಬಂತು. ಬೀಡಿನ ಶ್ಯಾನುಭಾಗ ನೌಕರಿಗೂ ಈ ಕಸ ಗುಡಿಸುವ ಹೊಲಸು ವೃತ್ತಿಗೂ ಎಷ್ಟು ವ್ಯತ್ಯಾಸ? ಆದರೆ ಬೇರೆ ವಿಧಿಯಿಲ್ಲದಾ ಯಿತು ರಾಮಣ್ಣನಿಗೆ. ಆತನೀಗ 'ಮಾಡಿದ್ದುಣ್ಣುವ ಮಹಾರಾಯ'ನಾಗಿ ದ್ದಾನೆ.

ಸಿನಿಮಾ ಮಂದಿರದ ಕಸಗುಡಿಸುವ ರೀತಿಯು ಚಾಕರಿಗೆ ರಾಮಣ್ಣನಲ್ಲದೆ ಇನ್ನೂ ಈರ್ವರು ಇದ್ದಾರೆ. ಮೆನೇಜರ್ ಸಾಹೇಬರ ಕೊಠಡಿಗೆ ಅವರು ಆಗಾಗ ಕರೆಬಂದಾಗ ಹೋಗುತ್ತಿರಬೇಕು. ಅವರಿಗೆ ಕಾಫಿ, ಊಟ, ಸಿಗರೇಟ್ ಎಲ್ಲಾ ಅಲ್ಲಿಗೆ ತಂದುಕೊಡಬೇಕು. ಈ ಕೆಲಸಗಳನ್ನೆಲ್ಲಾ ಮೊದಲಿನ ಇಬ್ಬರು ಮಾಡುತಿದ್ದರು. ರಾಮಣ್ಣ ಮೆನೇಜರರ ಕೊಠಡಿಗೆ ಹೋಗುವುದು ಪ್ರತೀ ದಿನ ಬೆಳಿಗ್ಗೆ ಎಂಟು ಗಂಟೆಗೆ. ಕೊಠಡಿಯ ಕಸಗುಡಿಸಿ, ಕುರ್ಚಿ ಮೇಜುಗಳನ್ನು ಬಟ್ಟೆಯಿಂದ ಉಜ್ಜಿ ಶುಭ್ರಮಾಡಿ ಆತ ಬರಬೇಕು.

ಪಾಪಿ ಹೋದಲ್ಲಿ ಮೊಣಕಾಲಿನ ತನಕವೇ ನೀರು! ಮೆನೇಜರರು ಮೂರು ಮಂದಿ ಪೇದೆಗಳನ್ನು ಕರೆಸಿದ್ದಾರೆ. ಅವರಲ್ಲಿ ರಾಮಣ್ಣನೂ ಇದ್ದಾನೆ. ಮೆನೇಜರರು ಈ ದಿನ ಬೆಳಿಗ್ಗೆ ಕೊಠಡಿ ಬಿಟ್ಟು ಹೊರಗೆ ಯಾರೊಡನೆಯೋ ಮಾತನಾಡಲು ಹೋಗಿದ್ದಾಗ ಅವರ ಹಣದ ಪಕೇಟು ಕೊಠಡಿಯಲ್ಲೇ ಉಳಿದುಹೋಗಿತ್ತಂತೆ. ಅವರು ಹೊರಗಿನಿಂದ ಬರುವಾಗ ಪಕೇಟು ಕಾಣೆಯಾಗಿತ್ತಂತೆ. ಮೊದಲಿನ ಇಬ್ಬರು ಪೇದೆಗಳೂ ತಾವು ಕೊಠಡಿಗೆ ಈ ದಿನ ಕಾಲೇ ಇರಿಸಿಲ್ಲವೆಂದು ಬಿನ್ನವಿಸಿಕೊಂಡರು. ರಾಮಣ್ಣ ದಿನನಿತ್ಯದಂತೆ ಈ ದಿನವೂ ಬೆಳಿಗ್ಗೆ ಕೊಠಡಿಯನ್ನು ಗುಡಿಸಲು ಬಂದಿದ್ದೇನೆಂದು ಒಪ್ಪಿಕೊಂಡನು. ಆದರೆ ಹಣದ ಪಕೇಟಿನ ವಿಷಯ ತಾನು ಏನೂ ಅರಿಯಲಾರೆನೆಂದು ಎಷ್ಟು ಹೇಳಿಕೊಂಡರೂ ಮೆನೇಜರರು ಕೇಳಲಿಲ್ಲ. ಕದ್ದವನು ರಾಮಣ್ಣನೇ ಇರಬೇಕೆಂದು ನಿಶ್ಚಯವಾಗಿ ನಂಬಿಕೊಂಡರು. ಉಳಿದ ಇಬ್ಬರು ಪೇದೆಗಳೊಡನೆ ರಾಮಣ್ಣನ ಕಿಸೆ ಪರಿಶೀಲಿಸಲು ಆಜ್ಞೆ ಮಾಡಿದರು.

ರಾಮಣ್ಣ ಅಪರಾಧಿಯಂತೆ ನಿಂತಿದ್ದಾನೆ. ಇಬ್ಬರು ಪೇದೆಗಳು ಅವನ ಮೈಮೇಲೆ ಕೈಹಾಕಿ ಅವನಲ್ಲಿ ಹಣದ ಪಕೇಟು ಇದೆಯೇ ಎಂದು ಶೋಧಿಸುತಿದ್ದರು.

ಹೌದು. ರಾಮಣ್ಣನಲ್ಲಿ ಹಣದ ಪಕೇಟು ಇದೆ. ಪಕೇಟಿನಲ್ಲಿ ಹಣವೂ ಇದೆ. ಯಾರ ಹಣ? ಮೆನೇಜರರ ಕಳವಾದ ಹಣವೇ? ರಾಮಣ್ಣ ನೌಕರಿ ಮಾಡಿ, ಬೆವರಿಳಿಸಿ ದುಡಿದು, ಉಳಿಸಿಕೊಂಡ ನಾಲ್ಕು ನೂರು ರೂಪಾಯಿಗಳಲ್ಲಿ ಎರಡು ನೂರನ್ನು ತಾಯಿ ನೀಲಿಯ ಸೀರೆಯ ಸೆರಗಿನಲ್ಲಿ ಕಟ್ಟಿ, ಉಳಿದ ಎರಡು ನೂರರಲ್ಲಿ ಐವತ್ತು ರೂಪಾಯಿ ಠಕಾರಿ ಕಂಪೆನಿ ನೌಕರನಿಂದ ಅಪಹರಿಸಲ್ಪಟ್ಟು ಉಳಿದ ನೂರಐವತ್ತರಲ್ಲಿ ಕಡೂರಿನಿಂದ ಪುಣೆ ತನಕ ಟಿಕೇಟು ತೆಗೆದು, ದಿನಕ್ಕೆ

ಒಂದೆರಡು ಸಲ ಕಾಫಿ, ಎರಡು ಮೂರು ದಿನಗಳಿಗೊಮ್ಮೆ ಒಂದು ಊಟ ಉಂಡು, ಉಳಿದ ನೂರು ರೂಪಾಯಿಗಳು ರಾಮಣ್ಣನ ಪಕೇಟಿನಲ್ಲಿ ಇಲ್ಲದೆ ಎಲ್ಲಿ ಹೋಗಬೇಕು? ಅದು ರಾಮಣ್ಣನ ಬೆವರಿನ ಹಣ!

ಹಣದ ಪಕೇಟು! ನೂರು ರೂಪಾಯಿ! ಪೇದೆಗಳು ತಮ್ಮ ಅದ್ಭುತ ಶೋಧನೆಯನ್ನು ಮೆನೇಜರರಿಗೆ ತಿಳಿಸಿದರು.

"ಅರೇ, ತಿಂಗಳಿಗೆ ಹದಿನೈದು ರೂಪಾಯಿ ಪಗಾರದ ಘಟಿಂಗನಲ್ಲಿ ನೂರು ರೂಪಾಯಿ ಎಲ್ಲಿಂದ ಬಂತು?" ಎಂದು ಗರ್ಜಿಸಿ ಮೆನೇಜರರು ಪೋಲೀಸಿನವರಿಗೆ ಫೋನ್ ಮಾಡಲು ಮುಂದಾದರು.

ಪೋಲೀಸು! ಜೈಲು! ರಾಮಣ್ಣ ದಿಕ್ಕುಗಾಣದಾದ. ಮೆನೇಜರರ ಕಾಲಿಗೆ ಬಿದ್ದು, ದಮ್ಮಯ್ಯ ಹಾಕಿ, ತನ್ನ ಹಣವೆಲ್ಲವನ್ನೂ ಮೇನೇಜರರು ತೆಗೆದುಕೊಳ್ಳಬೇಕೆಂದೂ, ತನ್ನನ್ನು ಕೆಲಸದಿಂದ ತೆಗೆದುಹಾಕಬೇಕೆಂದೂ, ಪೋಲೀಸರ ಕೈಗೆ ಎಷ್ಟುಮಾತ್ರಕ್ಕೂ ಕೊಡಬಾರದೆಂದೂ ಬೇಡಿಕೊಂಡ. ಮೇನೇಜರರಿಗೆ ಕಳ್ಳರ ಮೇಲೆ ಕನಿಕರವಿಲ್ಲ. ಆದರೂ ರಾಮಣ್ಣನ ಕಣ್ಣೀರು ಆತನ ಪಾದದಡಿಯಲ್ಲಿ ಹರಿದುಹೋಗುತ್ತಿದ್ದುದನ್ನು ಕಂಡು ಯಾರ ಹೃದಯ ವಾದರೂ ಕರಗದೆ ಹೋದೀತೆ? ಹದಿನೈದು ರೂಪಾಯಿ ಪಗಾರ ಜೀವನಕ್ಕೆ ಸಾಕಾಗದೆ ಕದ್ದಿರಬೇಕೆಂದು ಮೆನೇಜರರು ಯೋಚಿಸಿದರು. ರಾಮಣ್ಣನ ಪಕೇಟಿನಿಂದ ನೂರು ರೂಪಾಯಿಗಳನ್ನು ತೆಗೆದುಕೊಂಡು ತನ್ನ ಪಕೇಟಿನಲ್ಲಿ ತುರುಕಿಸಿ ಆತನ ಪಕೇಟನ್ನು ಹಿಂದೆಕೊಟ್ಟು, ಕೆಲಸದಿಂದ ತೆಗೆದು ಹಾಕಿ, ಆತನು ದುಡಿದ ಹದಿನೈದು ದಿನಗಳ ಪಗಾರ ಆತನಿಗಿತ್ತು ಕಳುಹಿಸಿಕೊಟ್ಟರು.

ರಾಮಣ್ಣನಿಗೆ ಇದಕ್ಕಿಂತ ಹೆಚ್ಚಿನ ಕಷ್ಟ ಇನ್ನೆಲ್ಲಿ? ನೌಕರಿ ದೊರೆಯ ದಿದ್ದರೂ ಒಂದು ನೂರು ರೂಪಾಯಿ ತನ್ನಲ್ಲಿದೆಯೆಂದು ರಾಮಣ್ಣನಿಗೆ ನಿನ್ನೆಯ ತನಕ ಧೈರ್ಯವಿತ್ತು. ಇಂದೀಗ ಇದ್ದ ಕೆಲಸವನ್ನು ಕಳೆದುಕೊಂಡು, ಹದಿ ನೈದು ದಿನಗಳ ಏಳುವರೆ ರೂಪಾಯಿಗಳನ್ನು ಹಿಡಿದುಕೊಂಡು, ನಿರ್ಗತಿಕ ನಾಗಿ ಪುಣೆಯ ಮಾರ್ಗದಲ್ಲಿ ಮಧ್ಯಾಹ್ನದ ಬಿಸಿಲಿಗೆ ತಲೆಯೊಡ್ಡಿಕೊಂಡು, ನಿರ್ಗತಿಕನಾಗಿ ನಡೆಯುತ್ತಿದ್ದಾನೆ—ಶ್ಯಾನುಭಾಗ ರಾಮಣ್ಣ.

ಉಡುಪಿ ಹೋಟೆಲು! ರಾಮಣ್ಣ ಕಣ್ಣರಳಿಸಿ ನೋಡಿದ. ದಪ್ಪ ಹಲಿಗೆಯ ಮೇಲೆ ದೊಡ್ಡ ಅಕ್ಷರಗಳಿಂದ ಬರೆದಿತ್ತು. ರಾಮಣ್ಣನಿಗೆ ತುಂಬಾ ಹಸಿವಾಗಿತ್ತು. ಮೆಲ್ಲಮೆಲ್ಲನೆ ಒಳಗೆ ಹೋಗಿ ಕುಳಿತು ಕಾಫಿ ಕುಡಿಯತೊಡ

ಗಿದ. ಹೋಟೆಲಿನ ಮಾಣಿಗಳೆಲ್ಲ ಕನ್ನಡ-ತುಳು ಮಾತನಾಡುತಿದ್ದರು. ಆ ಮಾಣಿಗಳಿಗೆಲ್ಲಾ ಒಂದು ಧೈರ್ಯ. ಪುಣೆಯಲ್ಲಿ ತಮ್ಮ ಹೋಟೆಲಿಗೆ ಬರುವ ಹೆಚ್ಚಿನ ಮಂದಿ ಗಿರಾಕಿಗಳಿಗೆ ಕನ್ನಡ ತಿಳಿಯಲಿಕ್ಕಿಲ್ಲವೆಂದು, ಒಂದು ವೇಳೆ ಮೈಸೂರು-ಬೆಂಗಳೂರಿನವರೋ, ಹುಬ್ಬಳ್ಳಿ-ಧಾರವಾಡದವರೋ ಬಂದುಬಿಟ್ಟರೆ ಅವರಿಗೆ ಕನ್ನಡ ಬಂದರೂ ತುಳು ಬರುವ ಮಕ್ಕಳು ಈ ಊರಲ್ಲೇ ಇಲ್ಲವೆಂದು ಅವರ ಧೈರ್ಯ. ಅದಕ್ಕಾಗಿ ಗಿರಾಕಿಗಳು ಕುಳಿತು ಕಾಫಿ ಕುಡಿಯುತ್ತಿರುವಾಗ ಅವರ ಮುಖಲಕ್ಷಣ, ವೇಷಭೂಷಣಗಳ ಕುರಿತು ತಮ್ಮೊಳಗೆ ಗೇಲಿ ಮಾಡದೆ ಬಿಡುವವರಲ್ಲ. ನಾರಾಯಣ ಭಟ್ಟ—"ನೋಡ ವಾಸ್ತೇವ . . . . ಈ ಅಸಾಮಿಯನ್ನು! ಕಾಫಿ ಕಣ್ಣಾಲ್ಲೆ ಇಷ್ಟರ ತನಕ ನೋಡದವನಂತೆ ಬಕ ಬಕ ಕುಡಿದುಬಿಟ್ಟ." ವಾಸ್ತೇವ—"ಅರೆರೇ, ಈ ಗುಮ್ಮಟ್ರಾಯ ಎಷ್ಟು ಗಟ್ಟಿಮುಟ್ಟಾಗಿದ್ದಾನೆ. ಆದರೂ ಗಡ್ಡಕ್ಕೆ ಬಾಳು ತಾಗಿಸಲಿಲ್ಲ. ಬಟ್ಟೆಗೆ ಸಾಬೂನು ತೋರಿಸಲಿಲ್ಲ. ತಲೆಗೆ ಎಣ್ಣೆ ರುಚಿಯೇ ಗೊತ್ತಿರಲಿಕ್ಕಿಲ್ಲ. ಈ ನಡೆಯುದ ನಾಣ್ಯ ಯಾವೂರಿನದೋ?"

ಸಂಭಾಷಣೆಯೆಲ್ಲಾ ತುಳುವಿನಲ್ಲೇ ನಡೆಯುತಿತ್ತು. ಅಷ್ಟು ದೂರದ ಊರಿನಲ್ಲಿ ತುಳು ಮಾತನಾಡುವ ಮಂದಿಯನ್ನು ಕಂಡೊಡನೆ ರಾಮಣ ಸಂತಸದಿಂದ ತನ್ನ ಬೇನೆ ಬೇಸರಗಳನ್ನೆಲ್ಲಾ ಮರತೇ ಬಿಟ್ಟ.

ನಾರಾಯಣಭಟ್ಟ ವಾಸ್ತೇವರ ಬಳಿಗೆ ಹೋಗಿ ತಾನು ಅವರ ಉಡುಪಿ ಕಡೆಯವನೇ ಎಂದೂ ಕೆಲಸವಿಲ್ಲದೆ ಹಲವಾರು ದಿನಗಳಿಂದ ಈ ರೀತಿಯಾಗಿ ತಿರುಗುತ್ತಿರುವೆನೆಂದೂ ಹೇಳಿಕೊಂಡ. ನಾರಾಯಣ ಭಟ್ಟ ವಾಸ್ತೇವರಿಗೆ ಆದ ನಾಚಿಕೆ ಅವರಿಗೇ ಗೊತ್ತು. ತಾವು ತಿಳಿಯದೆ ತಮಾಷೆಗಾಗಿ ಆಡಿದ ಮಾತುಗಳಿಗಾಗಿ ಅವರಿಗೆ ತುಂಬಾ ಪಶ್ಚಾತ್ತಾಪವಾಯಿತು. ರಾಮಣ್ಣನ ಕತೆ ಕೇಳಿಯಂತೂ ತುಂಬಾ ಅನುತಾಪ ಉಂಟಾಯಿತು. ಹೋಟೇಲಿನ ಮ್ಹಾಲಿಕರನ್ನು ವಿಚಾರಿಸಿ ವಿನಂತಿ ಮಾಡಿಕೊಂಡರೆ ಕೆಲಸ ಖಂಡಿತ ಸಿಗಬಹುದೆಂದು ಆಶ್ವಾಸನೆ ಇತ್ತರು.

ರಾಮಣ್ಣ ಮ್ಹಾಲಿಕರ ಮುಂಡದ ಬಳಿ ಹೋಗಿ ಕಾಫಿಯ ಹಣ ಮೊದಲು ತೆತ್ತು ಕೆಲಸವೇನಾದರೂ ದೊರೆಯಬಹುದೇ ಎಂದು ವಿಚಾರಿಸಿದ. ಮ್ಹಾಲಿಕ ಮಾಧವ ಭಟ್ಟರು ತುಂಬಾ ಸರಳ ಜೀವಿಗಳು. ಜನಜೀವನದ ಕಹಿಯನ್ನು ಚೆನ್ನಾಗಿ ಉಂಡವರು. ಅದರಿಂದಲೇ ಬಡವನ ಮರುಕ ಅವರಿಗೆ ಚೆನ್ನಾಗಿ

ಗೊತ್ತಿದೆ. ಅವರ ಹೋಟೆಲು ಪುಣೆಯಲ್ಲಿ ಒಂದಲ್ಲ; ಇನ್ನೊಂದು ಬ್ರ್ಯಾಂಚೂ ಇದೆ. ರಾಮಣ್ಣನನ್ನು ಸಂತೋಷದಿಂದ ಕೆಲಸಕ್ಕೆ ತೆಗೆದುಕೊಂಡರು. ಊಟ, ಕಾಫಿ ಇತರ ಖರ್ಚುಗಳು, ವಾರಕ್ಕೆ ಒಂದು ಬಾರಿ ಸಿನೆಮಾ, ಇವೆಲ್ಲ ಹೋಗಿ ತಿಂಗಳಿಗೆ ಇಪ್ಪತ್ತು ರೂಪಾಯಿ ಪಗಾರವೆಂದರೆ ದುಡಿಯುವವರಿಗೆ ಅತೃಪ್ತಿಯೆಲ್ಲಿ?

ರಾಮಣ್ಣ ಕೆಲಸಕ್ಕೆ ಸೇರಿದ ಒಂದು ತಿಂಗಳಲ್ಲಿಯೇ ಮಾಧವ ಭಟ್ಟರ ಪ್ರೀತಿಗೆ ಆತ ಪಾತ್ರನಾದ. ಒಮ್ಮೊಮ್ಮೆ ಆತ ಗಿರಾಕಿಗಳಿಂದ ಹಣ ತೆಗೆದುಕೊಳ್ಳುವುದಕ್ಕಾಗಿ ಮಂಡದಲ್ಲಿ ಕುಳಿತುಕೊಳ್ಳುವ ವಿಶ್ವಾಸಕ್ಕೂ ಪಾತ್ರನಾದ. ಯಾವುದೊಂದು ದುರಾಭ್ಯಾಸವೂ ಆತನನ್ನು ಅಂಟಿಕೊಳ್ಳಲಿಲ್ಲ. ತಿಂಗಳಿಗೆ ಸಿಗುವ ಇಪ್ಪತ್ತು ರೂಪಾಯಿಗಳಲ್ಲಿ ಹದಿನೆಂಟು ರೂಪಾಯಿಗಳೂ ಆತನ ಉಳಿಕೆಯ ಹಣವಾಯಿತು. ಉಳಿಕೆಯ ಹಣವನ್ನೆಲ್ಲಾ ಮಾಧವ ಭಟ್ಟರಲ್ಲಿಯೇ ಉಳಿಸಿಕೊಂಡ.

ಶನಿವಾರ ಹೋಟೆಲಿಗೆ ವಾರದ ರಜಾದಿನ. ಆ ದಿನ ಮಧ್ಯಾಹ್ನದ ಮೆಟ್ನಿ ಚಿತ್ರಕ್ಕೆ ಹೋಟೇಲು ಹುಡುಗರೆಲ್ಲ ಹೋಗುತ್ತಾರೆ. ರಾಮಣ್ಣ ಎಷ್ಟು ಬಾರಿ ಬರಲೊಲ್ಲೆನೆಂದರೂ ನಾರಾಯಣ ಭಟ್ಟ, ವಾಸ್ತೇವರ ಬಲವಂತದಿಂದ ಒಮ್ಮೆ ಹೊರಡಲೇಬೇಕಾಯಿತು.

ಸಿನೆಮಾ ಮಂದಿರಕ್ಕೆ ಮುಟ್ಟಿತು. ರಾಮಣ್ಣನ ಹೃದಯ ಕಂಪಿಸತೊಡಗಿತು. ತಾನು ಕಳ್ಳತನದ ಅಪರಾಧಕ್ಕೆ ತುತ್ತಾಗಿ ಕೆಲಸದಿಂದ ಹೊರತಳ್ಳಲ್ಪಟ್ಟ ಸಿನಿಮಾ ಮಂದಿರಕ್ಕೆ ಅವರು ತನ್ನನ್ನು ಕರೆದುಕೊಂಡು ಹೋಗುತ್ತಿರುವುದು ಎಂದು ಆತ ಎಣಿಸಿಯೇ ಇರಲಿಲ್ಲ. ಎಲ್ಲಿಯಾದರೂ ಆ ಮೆನೇಜರರು ತನ್ನನ್ನು ಗುರುತಿಸಿಬಿಟ್ಟರೆ, ಆ ಇಬ್ಬರು ಪೇದೆಗಳು ನನ್ನನ್ನು ನೋಡಿಬಿಟ್ಟರೆ, ತನ್ನ ಹೋಟೆಲಿನ ಮಿತ್ರರಿಗೆ ಈ ಗುಟ್ಟೆಲ್ಲಾ ತಿಳಿದುಬಿಟ್ಟರೆ, ಅಯ್ಯೋ ಎಂತಹ ಅವಮಾನವಾಗಬಹುದೆಂದು? ರಾಮಣ್ಣ ಅಂಜಿದ. ತಾನೇಕೆ ಇವರೊಂದಿಗೆ ಇಲ್ಲಿಗೆ ಬಂದುಬಿಟ್ಟೆನೆಂದು ತನ್ನನ್ನೆ ಶಪಿಸಿಕೊಂಡ.

ಟಿಕೇಟು ಪಡೆದುಕೊಂಡು ಮಂದಿರದೊಳಗೆ ರಾಮಣ್ಣ, ನಾರಾಯಣ, ವಾಸ್ತೇವರು ಪ್ರವೇಶಿಸುವಷ್ಟರಲ್ಲಿ ರಾಮಣ್ಣನನ್ನು ಯಾರೋ ಕರೆಯುತ್ತಲಿದ್ದರು. ರಾಮಣ್ಣ ತನ್ನನ್ನು ಕರೆಯುವವರಾರೆಂದು ಬರೇ ಸ್ವರದಿಂದಲೇ ಗುರುತಿಸಿಬಿಟ್ಟಿದ್ದನು. ಕರೆಯುತಿದ್ದುದು ಥಿಯೇಟರಿನ ಮೆನೇಜರರು.

ರಾಮಣ್ಣ ಕೇಳಿಯೂ ಕೇಳದವನಂತೆ ಮಾಡಿ, ಮಿತ್ರರ ಮಧ್ಯೆಯೂ ಇತರ ಮಂದಿಯ ಮಧ್ಯೆಯೂ ಮೆಲ್ಲನೆ ನುಸುಳಿಕೊಂಡು ಒಳಹೋಗಿ ಕುಳಿತನು. ಹಾಗೆ ಕುಳಿತರೆ ಮೆನೇಜರರು ನೋಡುವುದಿಲ್ಲವೇ? ಪೇದೆ ಹೋಗಿ ರಾಮಣ್ಣ ನನ್ನು "ಮೆನೇಜರರು ಕರೆಕಳುಹಿಸಿದ್ದಾರೆ...... ಜರೂರು ಬರಬೇಕಂತೆ" ಎಂದು ಕುಳಿತಲ್ಲಿಗೆ ಹೋಗಿ ತಿಳಿಸಿದ. ಇಷ್ಟರಲ್ಲಿ ನಾರಾಯಣನೂ ವಾಸ್ತೇ ವನೂ ಚಿತ್ರ ಪ್ರಾರಂಭವಾಗಲು ಹತ್ತು ಮಿನಿಟು ಇನ್ನೂ ಇದ್ದುದರಿಂದ ಸಿಗರೇಟು ತರುವುದಕ್ಕಾಗಿ ಹೊರಗೆಹೋಗಿದ್ದರು. ಇನ್ನು ಹೋಗದೆ ಇಲ್ಲಿಯೇ ಕುಳಿತರೆ, ತನ್ನ ಮಿತ್ರರೂ ಬಂದರೆ ಅವರಿಗೂ ತಿಳಿದುಬಿಟ್ಟರೆ ಮಹಾ ಪ್ರಮಾದವಾಗುವುದೆಂದು ಮೆಲ್ಲನೆ ಭಯದಿಂದ ಮೆನೇಜರರ ಕೊಠಡಿಗೆ ನಡೆದ. ಇನ್ನೇನು ವಿಪತ್ತು ಬಂದೊದಗುವುದೋ ಎಂದು ರಾಮಣ್ಣ ಬಾರಿಬಾರಿಗೂ ಭಯದಿಂದ ನಡುಗುತ್ತಲೇ ಇದ್ದ.

ಕೆಲವರು ಅವಿವೇಕದಿಂದ ಕ್ರೂರಸ್ವಭಾವಿಗಳೆಂದು ಕಾಣಿಸಿಕೊಂಡರೂ ವಸ್ತುತಃ ಹಾಗಿರುವುದಿಲ್ಲ. ಮೆನೇಜರರ ಕೈಯಿಂದ ಮಹತ್ತಾದ ಒಂದು ಅಪರಾಧವು ಆಗಿಹೋಗಿತ್ತು. ಆ ದಿನ ನಿಜವಾಗಿಯೂ ರಾಮಣ್ಣ ಅವರ ನೂರು ರೂಪಾಯಿಗಳನ್ನು ಕಳವು ಮಾಡಿರಲಿಲ್ಲ. ರಾಮಣ್ಣನೇಕೆ? ಇನ್ನಾರೂ ಅವರ ರೂಪಾಯಿಯನ್ನು ಕಳವು ಮಾಡಿರಲಿಲ್ಲ. ಅವರ ಹಣದ ಪಕೇಟು ಅವರ ಮನೆಯಲ್ಲಿಯೇ ಹಿಂದಿನ ದಿನ ಹಾಕಿದ ಕೋಟಿನ ಕಿಸೆಯಲ್ಲಿ ಉಳಿದು ಹೋಗಿತ್ತು. ರಾಮಣ್ಣ ಕದ್ದವನೆಂದು ನಿರ್ಧರಿಸಿ ಅವನ ಕಿಸೆಯಲ್ಲಿದ್ದ ನೂರು ರೂಪಾಯಿಗಳನ್ನು ಕಿತ್ತು, ಅವನನ್ನು ಕೆಲಸದಿಂದ ತಳ್ಳಿ ಅವಮಾನ ಪಡಿಸಿದ ಅನಂತರ ಸಂಜೆ ಮನೆಗೆ ಹೋಗಿ ನೋಡಿದಾಗ ಅವರಿಂದುಟಾದ ಅಪರಾಧ ಅವರಿಗೆ ತಿಳಿಯಿತು. ಅದಕ್ಕಾಗಿ ಅವರು ತುಂಬಾ ಮರುಗಿಕೊಂಡರು. ರಾಮಣ್ಣ ಪೇಟೆಯಲ್ಲಿ ಎಲ್ಲಾದರೂ ಸಿಗುವನೇ ಎಂದು ನೋಡಬೇಕೆಂದು ಪೇದೆಗಳಲ್ಲಿ ಹೇಳಿದರೂ ನಿಷ್ಫಲವಾಯಿತು. ಯಾವುದೋ ಒಂದು ಮೂಲೆ ಯಲ್ಲಿ ಕಾಫಿ ಹೋಟೆಲಿನಲ್ಲಿ ಹಗಲು ರಾತ್ರೆ ದುಡಿಯುತ್ತಿರುವ ರಾಮಣ್ಣ ಮೆನೇಜರರ ಕಣ್ಣಿಗೆ ಬೀಳಲೇ ಇಲ್ಲ. ರಾಮಣ್ಣನನ್ನು ಕಂಡು ಅವನ ಹಣ ವನ್ನು ಅವನಿಗೆ ಹಿಂದೆ ಕೊಡದೆ ಮೆನೇಜರರ ಮನಸ್ಸಿಗೆ ನೆಮ್ಮದಿಯೇ ಇಲ್ಲ ದಾಗಿತ್ತು. ಒಂದುವೇಳೆ ಆತನ ಬೇಡಿಕೆಯನ್ನು ಮನ್ನಿಸದೆ ಆತನನ್ನು ಪೋಲೀಸರ ವಶಕೊಟ್ಟು ಜೈಲಿಗೆ ಕಳುಹಿಸುತಿದ್ದರೆ ಎಂತಹ ಪ್ರಮಾದ ವಾಗುತಿತ್ತು?

ರಾಮಣ್ಣನಿಗೆ ಆಶ್ಚರ್ಯವಾಯಿತು. ಜನರಲ್ಲಿ ಮಾನವೀಯತೆ ಸಂಪೂರ್ಣವಾಗಿ ಅಳಿಯಲಿಲ್ಲವೆಂದು ಅರಿವಾಯಿತು. ಪಿಟ್ಟಿನ್ನದೆ ಮೆನೇಜರರು ಕೈಗಿತ್ತ ನೂರು ರೂಪಾಯಿಯ ನೋಟನ್ನು ಅತೀ ವಿನಯತೆಯಿಂದ ಸ್ವೀಕರಿಸಿಕೊಂಡು ಚಿತ್ರ ಪ್ರಾರಂಭವಾಗುವ ಹೊತ್ತಿಗೇ ಬಂದು ತನ್ನ ಸ್ನೇಹಿತರೊಡನೆ ಕುಳಿತುಕೊಂಡ.

---

## 23

ಪುಣೆಯಲ್ಲಿ ಹತ್ತುವರ್ಷ ಜೀವನ ನಡೆಯಿತು. ಇದರೊಳಗೆ ರಾಮಣ್ಣನ ಜೀವನದಲ್ಲಿ ಎಷ್ಟೋ ಬದಲಾವಣೆಗಳಾಗಿ ಹೋದುವು. ಅವನೀಗ ಕಾಫಿ ಹೋಟೆಲಿನಲ್ಲಿ ದುಡಿಯುವ ಸೇವಕನಲ್ಲ. ತಿಂಗಳ ಸಂಪಾದನೆಯಲ್ಲಿ ಒಂದು ಚಿಕ್ಕಾಸನ್ನೂ ಆತ ಅನಾವಶ್ಯಕವಾಗಿ ವ್ಯಯಿಸಲಿಲ್ಲ. ಅದೆಲ್ಲಾ ಮಾಧವ ಭಟ್ಟರ ಕೈಯಲ್ಲೇ ಬೆಳೆಯುತ್ತಾ ಹೋಯಿತು. ರಾಮಣ್ಣನ ನಿಸ್ವಾರ್ಥ ಜೀವನ, ಪ್ರಾಮಾಣಿಕತೆ, ಗುಣನಡತೆಗಳನ್ನು ಕಂಡು ಮಾಧವ ಭಟ್ಟರು ಮನಸೋತು ಹೋದರು. ಆತನ ದುಡಿಮೆಯ ಹಣ ಒಂದು ಸಾವಿರದಷ್ಟಾಗುವಾಗ ತನ್ನ ಹೋಟೆಲಿನ ಬಳಿ ರಾಮಣ್ಣನಿಗೆ ಸ್ವಂತ ಹೋಟೆಲನ್ನು ತೆಗೆಸಿ ಕೊಟ್ಟರು. ರಾಮಣ್ಣ ಸ್ವತಂತ್ರ ವ್ಯಾಪಾರ ನಡಿಸತೊಡಗಿದ. ತಾನು ಯಾರಿಗಾಗಿ ದುಡಿಯುತ್ತಿರುವುದು? ತನ್ನ ಜೀವನದ ಧ್ಯೇಯವೇನು? ಎಂಬ ಯಾವ ವಿಷಯವನ್ನೂ ರಾಮಣ್ಣ ಮನಸ್ಸಿಗೆ ಹಚ್ಚಿಕೊಳ್ಳಲೇ ಇಲ್ಲ. ತನ್ನ ಕೆಲಸಗಳನ್ನೆಲ್ಲಾ ಶ್ರದ್ಧೆಯಿಂದ ಮಾಡಿಕೊಂಡು ಬಂದ ಪರಿಣಾಮವಾಗಿ ರಾಮಣ್ಣನ ವ್ಯಾಪಾರದಲ್ಲಿ ಸುಮಾರು ಹತ್ತು ಹನ್ನೆರಡು ಸಾವಿರ ರೂಪಾಯಿಗಳಷ್ಟು ಲಾಭ ದೊರೆಯುವಂತಾಯಿತು.

ಇದರೆಡೆ ಇನ್ನೊಂದು ಕಷ್ಟ ಎದುರಾಯಿತು. ಮಾಧವ ಭಟ್ಟರು ಹೊಟೇಲನ್ನು ವಹಿಸಿಕೊಂಡ ಅವಧಿಯು ಮುಗಿಯುತ್ತಾ ಬಂದಿತು. ಮುಂದಿನ ವರ್ಷವಂತೂ ಆ ಹೊಟೇಲು ಅವರಿಗೆ ಸಿಗುವಂತಿಲ್ಲ. ಅವರು ಗಳಿಸಿದ ಹಣ ಸಂಪತ್ತುಗಳನ್ನು ನೋಡಿ ಅನೇಕ ಮಂದಿ, ಹೊಟೇಲು ಕಟ್ಟಡದ ಧನಿಗಳನ್ನು ಮೆಚ್ಚಿಸಿ ಮುಂದಿನ ವರ್ಷ ಮಾಧವ ಭಟ್ಟರಿಗೆ ಸಿಗದಂತೆ ಮಾಡಿದರು. ಮಾಧವ ಭಟ್ಟರೇನು ಎದೆಗೆಡುವ ವ್ಯಕ್ತಿಯಲ್ಲ. ಅವರಲ್ಲೀಗ ಬೇಕಾದಷ್ಟು ಹಣವಿದೆ. ಅದಲ್ಲದೆ ಅವರು ತುಂಬಾ ಸಾಹಸಿವ್ಯಕ್ತಿ. ಮಹತ್ವಾಕಾಂಕ್ಷೆಯುಳ್ಳವರು.

ಮುಂಬಯಿಗೆ ಹೋಗಿ ಮಾತುಂಗಾದಲ್ಲಿ ಹೊಸತೊಂದು ದೊಡ್ಡ ಕಟ್ಟಡವನ್ನು ಹೊಟೇಲು ತೆರೆಯುವುದಕ್ಕಾಗಿ ಗೊತ್ತುಮಾಡಿಕೊಂಡರು.

ಮಾಧವ ಭಟ್ಟರು ಮುಂಬಯಿಗೆ ಹೋಗುವುದಾದರೆ ತಾನು ಯಾವ ಸುಖಕ್ಕಾಗಿ ಪುಣೆಯಲ್ಲಿ ನಿಲ್ಲುವುದು? ಎಂದು ರಾಮಣ್ಣನೂ ಮುಂಬಯಿಗೆ ಹೊರಡಲು ಸಿದ್ಧತೆಗಳನ್ನು ಮಾಡತೊಡಗಿದನು.

ಮಾಧವ ಭಟ್ಟರು ಗೊತ್ತುಮಾಡಿದ ಕಟ್ಟಡ ಬಹಳ ದೊಡ್ಡದು. ಮಾಳಿಗೆಯಲ್ಲಿ ಇಪ್ಪತ್ತೆರಡು ಕೋಣೆಗಳಿವೆ. ಅದರಲ್ಲಿ ವಸತಿಗೃಹವನ್ನೂ ಕೆಳಗೆ ಕಾಫಿಹೋಟೆಲನ್ನೂ ಮಾಧವ ಭಟ್ಟರು ತೆರೆದರು. ಅದೇ ಕಟ್ಟಡಕ್ಕೆ ಸೇರಿದ ಇನ್ನೊಂದು ಭಾಗದಲ್ಲಿ ರಾಮಣ್ಣ 'ಬಾಂಬೆ ಊಟದ ಹೋಟೆಲ'ನ್ನು ತೆರೆದನು!

ರಾಮಣ್ಣನ ಊಟದ ಹೋಟೆಲು ಮೊದಲು ಬರೇ ಶಾಕಾಹಾರ ಮಾತ್ರ ದೊರಕಿಸುತ್ತಿತ್ತು. ಅನಂತರ ಗಿರಾಕಿಗಳ ಅಪೇಕ್ಷೆಯಂತೆ ಇನ್ನೊಂದು ಭಾಗದಲ್ಲಿ ಮಾಂಸಾಹಾರದ ವಿಭಾಗವನ್ನೂ ರಾಮಣ್ಣ ತೆರೆದ.

ಮುಂಬಯಿಯ ಮಾತುಂಗಾ ಮದ್ರಾಸಿಗಳ ತವರುಮನೆ. ಮದ್ರಾಸಿನ ತಮಿಳರು, ತೆಲುಗರು, ಕನ್ನಡಿಗರು, ಮಲಯಾಳಿಗಳು ಎಲ್ಲಾ ಅಲ್ಲಿ ಗುಂಪು ಗುಂಪು ವಾಸಿಸುತ್ತಾರೆ. ಎಲ್ಲಿ ನೋಡಿದರೂ ದಕ್ಷಿಣ ಹಿಂದೂಸ್ಥಾನದ ಸಂಸ್ಕೃತಿ ಒಡೆದು ಕಾಣುತ್ತಿದೆ. ದಕ್ಷಿಣದ ಜನರಿಂದ ಕಿಕ್ಕಿರಿದ ಬೀದಿಗಳು, ದಕ್ಷಿಣದ ಮಕ್ಕಳಿಂದ ತುಂಬಿದ ಸಾಲೆಗಳು, ದಕ್ಷಿಣದ ಭಕ್ತರಿಂದ ಪೂಜಿಸಲ್ಪಡುವ ದೇಗುಲಗಳು, ದಕ್ಷಿಣದ ತರುಣರಿಂದ ತುಂಬಿದ ಆಟದ ಬಯಲುಗಳು, ಹೀಗೆ ಮುಂಬಯಿಯ ಮಾತುಂಗಾ ದಕ್ಷಿಣ ಹಿಂದೀಯರ ನೆಲೆಬೀಡಾಗಿ ಹೋಗಿತ್ತು.

ರಾಮಣ್ಣನ ಹೊಟೇಲು ದಿನಹೋದಂತೆ ಪ್ರಖ್ಯಾತಿ ಪಡೆಯುತ್ತಾ ಬಂತು. ಊಟಕ್ಕೆ ಬರುವ ಮಂದಿಯ ಸಂಖ್ಯೆ ಮಿತಿಮೀರಿ ಹೆಚ್ಚಿಹೋಯಿತು. ಶಾಲೆ ಕೊಲೇಜುಗಳ ವಿದ್ಯಾರ್ಥಿಗಳು, ಸರಿಕಾರಿ ಅಥವಾ ಕಂಪೆನಿಯ ನೌಕರರು ಹೀಗೆ ಯೋಗ್ಯ ಜನರೆಲ್ಲಾ ರಾಮಣ್ಣನ ನಿತ್ಯ ಗಿರಾಕಿಗಳಾಗಿ ಹೋದರು. ಎಲ್ಲರೂ ಊಟಮಾಡಿ, ಸ್ವಲ್ಪ ಕುಳಿತು, ರಾಮಣ್ಣನಲ್ಲಿ ಮಾತನಾಡಿ ಹೋಗುತ್ತಿದ್ದರು.

ಆದಿತ್ಯವಾರ ಶಾಲೆ ಕಾಲೇಜುಗಳಿಗೆ, ಸರಕಾರಿ ಕಚೇರಿಗಳಿಗೆ, ಕಂಪೆನಿಗಳಿಗೆಲ್ಲಾ ಹೆಚ್ಚಾಗಿ ರಜೆ. ಆ ದಿನದ ವ್ಯಾಪಾರವೇ ವ್ಯಾಪಾರ. ಮಧ್ಯಾಹ್ನದ ಹೊತ್ತಿಗೆ ಮೂರು ನಾಲ್ಕು ಮಂದಿ ತರುಣರು ಊಟಕ್ಕಾಗಿ ಬಂದರು.

ರಾಮಣ್ಣ ಅವರನ್ನೇ ನೋಡುತ್ತಾ ಏನೋ ಯೋಚನೆಯಲ್ಲಿ ಮಗ್ನನಾದ. ಅವರೆಲ್ಲಾ ಆಂಗ್ಲ ಪೋಷಾಕು ಧರಿಸಿದ್ದರು. ಕಾಲೇಜು ವಿದ್ಯಾರ್ಥಿಗಳಂತೆ ಕಾಣುತ್ತಿದ್ದರು. ರಾಮಣ್ಣ ಅವರ ಬಳಿ ಮೂರು ನಾಲ್ಕು ಬಾರಿ ಹೋಗಿ ಪುನಃ ಬಂದು ತನ್ನ ಕುರ್ಚಿಯ ಮೇಲೆ ಕುಳಿತುಕೊಂಡ. ಊಟಮಾಡಿ ಎಲ್ಲರೂ ಬಂದು ರಾಮಣ್ಣನ ಎದುರು ಕುರ್ಚಿಯಲ್ಲಿ ಕುಳಿತುಕೊಂಡರು. ಅವರಲ್ಲೊಬ್ಬ ರಾಮಣ್ಣನ ಮುಖವನ್ನೇ ಎವೆಯಿಕ್ಕದೆ ನೋಡುತ್ತಿದ್ದ. ರಾಮಣ್ಣನೂ ಅವನನ್ನೇ ನೋಡುತ್ತಲಿದ್ದ. ಆ ತರುಣ ಫಕ್ಕನೆ ಎದ್ದು, ರಾಮಣ್ಣನ ಬಳಿ ಬಂದು—"ಎಲ್ಲಿಯೋ ನೋಡಿದ ನೆನಪು.... ಯಾವೂರಾಯಿತು ತಮ್ಮದು?" ಎಂದು ಪ್ರಶ್ನಿಸಿದ. ಒಡನೆ ರಾಮಣ್ಣನಿಗೆ ತಾನು ಹಿಂದೆ ಬಸ್ಸಿನಲ್ಲಿ ಸಂಧಿಸಿದ ಶಿಕಾರಿ ವ್ಯಕ್ತಿಯ ನೆನಪಾಗದೆ ಇರಲಿಲ್ಲ. ಆದರೂ "ಮಂಗಳೂರು ಕಡೆ" ಎಂದು ಉತ್ತರಿಸಿದ.

"ಹೆಸರು?"

"ರಾಮಣ್ಣ"

"ರಾಮಣ್ಣ! ಶ್ಯಾನುಭಾಗರಾಗಿದ್ದವರು . . . . . .?"

ರಾಮಣ್ಣ ಸಂಭಾಷಣೆ ನಡೆಸುತ್ತಿರುವುದು ಹದಿನಾಲ್ಕು ವರ್ಷಗಳ ಹಿಂದೆ ತಿಮ್ಮನ ಪೆಟ್ಟುತಿಂದು, ಮುಂಬಯಿಗೆ ಓಡಿಬಂದ ನಿಂಗನೊಡನೆ! ಅಷ್ಟು ಸಂಭಾಷಣೆ ನಡೆದುದೇ ನಡೆದುದು. . . . . ಒಬ್ಬರನ್ನೊಬ್ಬರು ಗುರುತು ಹತ್ತಲು ಸಾಕಾಗಿತ್ತು. ರಾಮಣ್ಣ ನಿಂಗನನ್ನು ಅಪ್ಪಿಹಿಡಿದುಕೊಂಡನು.

ಹದಿನಾಲ್ಕು ವರ್ಷಗಳ ದೀರ್ಘ ಅವಧಿ, ರಾಮಣ್ಣ ಮತ್ತು ನಿಂಗರಲ್ಲಿ ಎಷ್ಟೋ ಬದಲಾವಣೆಗಳನ್ನು ಉಂಟುಮಾಡಿದ್ದುವು. ಪ್ರಯತ್ನಪಟ್ಟರೆ, ರಾಮಣ್ಣನನ್ನಾದರೂ ಗುರುತಿಸಬಹುದು. ಆದರೆ ನಿಂಗನನ್ನು ಗುರುತಿಸುವುದೇ ಕಷ್ಟವಾಗುತಿತ್ತು.

ನಿಂಗನೀಗ ಹಳ್ಳಿಯ ಹಠಮಾರಿ ಸೋಮಾರಿ ಹುಡುಗನಲ್ಲ. ಹದಿನಾಲ್ಕು ವರ್ಷಗಳ ಹಿಂದೆ ಊರುಬಿಟ್ಟು ಬರುವಾಗ ಮುಮ್ಮದೆಯಲ್ಲಿ ನುಡಿದ ಮಾತುಗಳನ್ನೆಲ್ಲಾ ಆತ ನಡೆಸಿಯೇ ಬಿಟ್ಟಿದ್ದಾನೆ. ಮುಂಬಯಿಯಲ್ಲಿ ಆತ ಮಾಡದ ಕಷ್ಟಕೆಲಸವಿಲ್ಲ. ಆದರೂ ಬಂದ ನಾಲ್ಕು ತಿಂಗಳುಗಳಲ್ಲಿಯೇ ಮುಮ್ಮದೆಯಿಂದ ಪಡೆದುಕೊಂಡ ಸಾಲದ ಹಣವನ್ನು ಕಳುಹಿಸಿಬಿಟ್ಟ. ಮುಂದಿನ ತಿಂಗಳಿನಿಂದಲೇ ತಂದೆಗೆ ಪ್ರತೀ ತಿಂಗಳು ಹತ್ತು ರೂಪಾಯಿಯಂತೆ

ಕಳುಹಿಸತೊಡಗಿದ. ತೆಂಗಿನಮರದಿಂದ ಬಿದ್ದು, ಕಾಲು ಮೋಟಾಗಿ ನರಳುತಿದ್ದ ಮುದುಕ ತಿಮ್ಮನಿಗೆ ಮಗನಿಂದ ಬರುವ ಹತ್ತು ರೂಪಾಯಿಗಳಿಂದ ಜೀವನ ನಿರಾತಂಕವಾಗಿಯೇ ಸಾಗುತಿತ್ತು. ಆದರೆ ವಿಧಿ ಆತನನ್ನು ಬಿಡಲೊಲ್ಲದು. ನಾಲ್ಕು ವರ್ಷಗಳಿಂದೀಚೆಗೆ ತಿಮ್ಮನಿಗೆ ಉದರವ್ಯಾಧಿಯೊಂದು ಉಂಟಾಯಿತು. ತಾನು ಇದರಲ್ಲಿ ಬದುಕುವುದು ಕಷ್ಟವೆಂದು ತಿಳಿದೊಡನೆ ತಿಮ್ಮ ನಿಂಗನಿಗೆ ಕಾಗದ ಬರೆಸಿದ. ನಿಂಗ ಊರಿಗೆ ಮುಟ್ಟುವುದರೊಳಗಾಗಿ ತಿಮ್ಮನ ಪ್ರಾಣಪಕ್ಷಿ ಹಾರಿಹೋಗಿತ್ತು. ಪ್ರಾಣ ಹೋಗುವ ವರೆಗೂ ಆ ಬಡಮುದುಕ, "ನಿಂಗ ಬಂದನೇ ...... ನನ್ನ ಮಗು ಬಂದನೇ?" ಎಂದು ಕೂಗಿ ಕರೆದು ಪ್ರಾಣಬಿಟ್ಟುದುದಂತೆ. ನಿಂಗ ಅದನ್ನು ಕೇಳಿ ಇದ್ದಕ್ಕಿದ್ದಂತೆಯೇ ಮೂರ್ಛೆಹೋದ. ಅನಂತರ ಚೇತರಿಸಿಕೊಂಡು ತಿಮ್ಮನ ಉತ್ತರಕ್ರಿಯೆಗಳನ್ನೆಲ್ಲಾ ಸಾಂಗವಾಗಿ ನೆರವೇರಿಸಿದ.

ತನ್ನ ತಂದೆಯ ಆತ್ಮೀಯರಾಗಿದ್ದ ಶ್ಯಾನುಭಾಗ ರಾಮಣ್ಣನವರಿಗೆ ಬಂದೊದಗಿದ ವಿಪತ್ತನ್ನು ಕೇಳಿ ನಿಂಗ ಅತೀ ವ್ಯಸನಪಟ್ಟನು. ಊರಿಗೆ ಊರೇ ನಾಗಿಯ ಗುಣಗಾನಮಾಡುತಿತ್ತು. ಭಾಗೀರಥಿ ಕಮಲರ ಪಿತೂರಿಯಿಂದಾಗಿ ಇಷ್ಟೆಲ್ಲಾ ಅನರ್ಥಗಳು ಸಂಭವಿಸಿದುವು ಎಂದು ಇಷ್ಟರಲ್ಲೇ ಎಲ್ಲರಿಗೂ ತಿಳಿದುಹೋಗಿತ್ತು. ಮಾಧವನ ಹೆಂಡತಿ ಕಮಲ, ಗಂಡನಲ್ಲಿ ಜಗಳವಾಡಿ, ಕೋಪದಿಂದ ಗಂಡನನ್ನು ತಿರಸ್ಕರಿಸಿ, ಮನೆಬಿಟ್ಟು ತವರುಮನೆಗೆ ಹೋಗಿದ್ದಳು. ಮಾಧವ, ತಾಯಿ ನೀಲಿಯನ್ನೂ, ತಮ್ಮನ ಮಗು ಸುಸೀಲಾಳನ್ನೂ ಮನೆಗೆ ಕರೆಸಿಕೊಂಡು ದುಡಿದು, ಅವರನ್ನೂ ಸಾಕುತಿದ್ದನು. ಕಮಲ ತವರುಮನೆಗೆ ಹೋದ ಅನಂತರವೂ ಭಾಗೀರಥಿಯವರ ಮೇಲಿನ ವಿಶ್ವಾಸ ಆಕೆಗೆ ಹೋಗಿರಲಿಲ್ಲ. ಅವರೊಳಗೆ ಟಪ್ಪಾಲಿನಲ್ಲಿ ಪತ್ರವ್ಯವಹಾರ ನಡೆಯುತ್ತಲೇ ಇತ್ತು. ಹಾಗೆ ಬಂದ ಕಮಲನ ಒಂದು ಪತ್ರ ಭಾಗೀರಥಿಯ ಅಜಾಗರೂಕತೆಯಿಂದ ಎಲ್ಲಿಯೋ ಬಿಸುಟದ್ದು, ಬೀಡಿನ ಧನಿಯವರ ಪತ್ನಿ ಚಂದ್ರಮತಿ ದೇವಿಯರ ಕೈಗೆ ಸಿಕ್ಕಿತ್ತು. ಅದರಲ್ಲಿ ನಾಗಿಯ ಮೇಲೆ ಭಾಗೀರಥಿ ಕಮಲರು ಹೊರಿಸಿದ ಅಪವಾದಗಳು—ಆಕೆಯ ಮೇಲೆ ತಾವು ಸೇಡು ತೀರಿಸಿಕೊಂಡ ಬಗೆ—ಹೀಗೆ ಎಲ್ಲಾ ವಿಷಯಗಳ ವಸ್ತುಸಂಗ್ರಹವಿತ್ತು. ಚಂದ್ರಮತಿ ತನ್ನ ಮನೆಗೆ ಬಂದಬಂದವರಿಗೆಲ್ಲಾ ಈ ಪತ್ರವನ್ನು ತೋರಿಸಿ, ನಾಗಿಗಾಗಿ—ಶ್ಯಾನುಭಾಗರಿಗಾಗಿ ಕಣ್ಣೀರು ಸುರಿಸುತಿದ್ದರು. ನಿಂಗನೂ

ಚಂದ್ರಮತಿದೇವಿಯರ ಮನೆಗೆ ಹೋಗಿದ್ದಾಗ, ಅವರು ಈ ಕುರಿತು ಎಲ್ಲಾ ವಿಷಯಗಳನ್ನು ತಿಳಿಸಿದ್ದರು. ನಿಂಗ, ಮಾಧವನ ಮನೆಗೆ ಹೋಗಿ ನೀಲಿ-ಸುಶೀಲಾರನ್ನು ಕಂಡಿದ್ದನು. ಸುಶೀಲಾ ಹನ್ನೆರಡನೆಯ ವರ್ಷದಲ್ಲಿ ಆಗ ಕಾಲಿಡುತಿದ್ದಳು. ಮುದ್ದುಮುದ್ದಾಗಿ ಬೆಳೆದಿದ್ದಳು. ನಿಂಗನನ್ನು ಕಂಡು ನಾಚಿಕೆಯಿಂದ ಹೊರಗೆ ಬರಲೇ ಇಲ್ಲ. ನೀಲಿ, ನಿಂಗನನ್ನು ಕಂಡೊಡನೆ ತನ್ನ ದುರ್ದೆಸೆಯನ್ನು ಆತನೊಡನೆ ಹೇಳಿಕೊಂಡು ಗೊಳೋ ಎಂದು ಅತ್ತಳು.

ಹದಿನಾಲ್ಕು ವರ್ಷಗಳ ಅನಂತರ ನಿಂಗನೀಗ ರಾಮಣ್ಣನನ್ನು ಕಾಣು ತ್ತಿದ್ದಾನೆ. ತನ್ನ ಮಿತ್ರರನ್ನು ಕಳುಹಿಸಿ ತಾನು ಮಾತ್ರ ರಾಮಣ್ಣನೊಡನೆ, ಮಹಡಿಯಲ್ಲಿರುವ ರಾಮಣ್ಣನ ಕೊಠಡಿಗೆ ಹೋಗಿ ಒಂದೊಂದೇ ಸಂಗತಿಗ ಳನ್ನು ವಿವರಿಸಿ ಹೇಳತೊಡಗಿದ.

ರಾಮಣ್ಣನಿಗೆ ಕಣ್ಣುಕತ್ತಲೆ ಬರತೊಡಗಿತು. ತಾನೆಂತಹ ಅವಿವೇಕ ತನಕ್ಕೆ ತುತ್ತಾಗಿ ಹೋದೆನೆಂದು ಆತ ತಿಳಿಯದೆ ಹೋದ. ನಾಗಿ ನಿರಪರಾಧಿನಿ ಯೆಂದು ಆತನಿಗೀಗ ಖಂಡಿತವಾಗಿ ಮನದಟ್ಟಾಯಿತು.

"ನಾಗಿ ಎಲ್ಲಿರುವಳು? ನಾಗಿ"

"................................"

"ಏಕೆ ನಿಂಗಾ? ಹೇಳು ಮಗೂ! ನಾಗಿಯೆಲ್ಲಿ? ಏನಾದಳು? ಅಯ್ಯೋ.... ನನಗಾಗಿ ನನ್ನ ಜೀವನದ ಹೋರಾಟದಲ್ಲಿ ಸಹಭಾಗಿಯಾಗಿ ಸಹಕರಿಸಿದ ಆಕೆಗೆ ನಾನು ಕೊಟ್ಟ ಪುರಸ್ಕಾರ? ಹೇಳು ನಿಂಗಾ, ನಾಗಿ ಏನಾದಳು?"

ನಿಂಗ ರಾಮಣ್ಣನನ್ನು ಸಂತೈಸಿದ. ನಾಗಿ ಸಮುದ್ರಕ್ಕೆ ಹಾರಿ ಜೀವ ತ್ಯಾಗಮಾಡಿಕೊಂಡಳೆಂದು ನೇರಾಗಿ ಹೇಳದಿದ್ದರೂ ಅದೇ ಅರ್ಥವನ್ನು ಸೂಚಿ ಸುವ ಮಾತುಗಳಿಂದ ತಿಳಿಯಹೇಳಿದ. ಇನ್ನೂ ಇನ್ನೂ ರಾಮಣ್ಣ ನಾಗಿಯ ಕುರಿತು ಮನಸ್ಸಿಗೆ ಬೇಗುದಿ ತಂದುಕೊಂಡರೆ ಫಲವೇನು? ಅದಕ್ಕಾಗಿ ನಿಂಗ ರಾಮಣ್ಣನಿಗೆ ಆತನ ಬಡ ತಾಯಿ, ಮುದ್ದು ಮಗಳು, ಪ್ರಿಯ ಸೋದರರ ನೆನಪು ಮಾಡಿಕೊಟ್ಟನು.

"ನಿಂಗಾ.... ನನಗೆ ಸದ್ಯವೇ ಊರಿಗೆ ಹೋಗಬೇಕು. ನೀನು ಬರಲೇ ಬೇಕು. ನೀನು ಬಾರದೆ ಹೋದರೆ ನಾನೂ ಹೋಗಲಾರೆ. ಯಾವ ಮುಖ ವನ್ನೆತ್ತಿಕೊಂಡು ಅಲ್ಲಿಗೆ ಹೋಗಲಿ? ಬರುವೆಯಾ ನಿಂಗಾ?"

ನಿಂಗ ಬರುವುದೆಂದರೆ ಅಷ್ಟು ಸುಲಭವೇ? ಅವನೊಂದು ಕಂಪೆನಿಯ

ಅಸಿಸ್ಟಾಂಟ್ ಮೆನೇಜರನಾಗಿದ್ದಾನೆ. ರಾಮಣ್ಣನಿಗೆ ಅದಿನ್ನು ನಿಂಗನಿಂದಲೇ ತಿಳಿಯಬೇಕಷ್ಟೆ. ಮನುಷ್ಯನು ಸಾಧಿಸಿದರೆ ಸಬಳವನ್ನಾದರೂ ನುಂಗಬಲ್ಲನು. ನಿಂಗ ಮಾಡದ ಕೆಲಸವಿಲ್ಲ. ದುಡಿಯದ ದುಡಿತವಿಲ್ಲ. ಇಷ್ಟು ದುಡಿದು ಅದರಲ್ಲಿ ಒಂದಂಶ ತಿಂಗಳು ತಿಂಗಳು ತಂದೆಗೆ ಕಳುಹಿಸುತ್ತಿದ್ದ. ರಾತ್ರಿ ಶಾಲೆಗೆ ಹೋಗಿ ಓದುಬರಹ ಕಲಿತುಕೊಂಡ. ಅವಿಶ್ರಾಂತ ಶ್ರಮ, ದೀರ್ಘಕಾಲದ ಸಾಹಸದ ಪ್ರತಿಫಲವಾಗಿ ನಿಂಗ ಮೆಟ್ರಿಕು ಪಾಸುಮಾಡಿಕೊಂಡ. ಯಾವ ಕಂಪೆನಿಯಲ್ಲಿ ಕೆಲಸದ ಹುಡುಗನಾಗಿ ನಿಂಗ ಸೇರಿಕೊಂಡನೋ ಅದೇ ಕಂಪೆನಿಯಲ್ಲಿಂದು ಆತ ಅಸಿಸ್ಟಾಂಟ್ ಮೆನೇಜರನಾಗಿ ದುಡಿಯುತ್ತಿದ್ದಾನೆ. ಬಸ್ಸು ಹೋಗುವ ಮಾರ್ಗದಲ್ಲಿ ಕಲ್ಲು ಇರಿಸಿ, ನಲ್ಲೂರಾಯನ ಗದ್ದೆಗೆ ತೂತು ಕೊರೆದು, ಕಮ್ತಿಯವರ ಹಸುಹಿಂಡನ್ನು ದೊಡ್ಡಿಗೆ ಕಟ್ಟಿ, ಊರಿಗೇ ಪೀಡೆ ಕೊಡುತ್ತಿದ್ದ ನಿಂಗನಿಂದು ಇಷ್ಟು ದೊಡ್ಡ ಮಹಾನುಭಾವನಾಗುವನೆಂದು ಯಾರಾದರೂ ಎಣಿಸಿರಬಹುದೇ?

ನಿಂಗನು ತಾನು ಒಂದು ತಿಂಗಳ ರಜೆಗೆ ಕಂಪೆನಿಗೆ ಬರೆಯುವೆನೆಂದು ಒಪ್ಪಿಕೊಂಡ. ರಾಮಣ್ಣ ತನ್ನ ದುರಂತ ಜೀವನ ಕತೆಯನ್ನು ಯಾರೊಡನೆಯೂ ಈ ತನಕ ಹೇಳಿರಲಿಲ್ಲ. ಆದರೆ ಆತನನ್ನು ಬಹಳ ಆದರದಿಂದ ಸಲಹಿದ ಮಾಧವ ಭಟ್ಟರಲ್ಲಿ ಹೇಳದೆ ವಿಧಿಯಿಲ್ಲ. ಎಲ್ಲವನ್ನೂ ಹೇಳಿಕೊಂಡ. ಮಾಧವ ಭಟ್ಟರು ಮನಸ್ಸಿನಲ್ಲಿ ಅಸಹನೀಯವಾದ ಮರುಕಪಟ್ಟರೂ ರಾಮಣ್ಣನಿಗೆ ಅದನ್ನು ತೋರ್ಪಡಿಸಲಿಲ್ಲ. ಊರಿಗೆ ಹೋಗಿ ತಾಯಿ, ಅಣ್ಣ, ಮಗಳನ್ನು ಸಂತೈಸಿ ಸಾಧ್ಯವಾದರೆ ಅವರೆಲ್ಲರನ್ನೂ ಮುಂಬಯಿಗೇ ಕರೆತರಲು ಹೇಳಿದರು. ಪ್ರಾಯ ಬಂದ ಮಗಳಿಗೆ ವಿದ್ಯಾವಂತನಾದ ಗುಣಶಾಲಿಯಾದ ಒಬ್ಬ ಹುಡುಗನನ್ನೂ ಹುಡುಕಬೇಕೆಂದರು. ರಾಮಣ್ಣ ಬರುವ ತನಕ ಹೊಟೇಲಿನ ಯೋಚನೆಯೇನೂ ಬೇಡ, ಎಲ್ಲವನ್ನೂ ತಾನೇ ನೋಡಿಕೊಳ್ಳುವೆನೆಂದು ಆಶ್ವಾಸನೆಯಿತ್ತು, ರಾಮಣ್ಣನ ಪ್ರಯಾಣವು ಸುಖದಾಯಕವಾಗಲೆಂದು ಹರಸಿ, ಕಳುಹಿಸಿದರು.

---

## 24

ಹದಿನಾಲ್ಕು ವರ್ಷಗಳ ಹಿಂದಿನ ರೈಲು ಬಸ್ಸು ಪ್ರಯಾಣಗಳ ಅನುಭವ ಈ ಬಾರಿಯೂ ಆಯಿತು. ಅದೇ ತಿಕ್ಕಾಟ, ಅದೇ ಜನಜಂಗುಳಿ, ಅದೇ ಸನ್ನಿವೇಶಗಳು! ಈ ಬಾರಿ ರಾಮಣ್ಣ ಏಕಾಂಗಿಯಲ್ಲ—ಆತನ ಜತೆಯಲ್ಲಿ ನಿಂಗನೂ ಇದ್ದಾನೆ. ಆತ ಈ ಬಾರಿ ಗರೀಬನಲ್ಲ—ಶ್ರೀಮಂತನಾಗಿದ್ದಾನೆ. ಆದರೆ ತಲೆ ಹಿಂದಿನಂತೆ ಈಗಲೂ ಕೆಟ್ಟೇ ಇದೆ. "ನಾಗಿ ತನಗೆ ದ್ರೋಹ ಮಾಡಿದ್ದು ನಿಜವಾಗಿದ್ದರೆ ಅವಳಿಗೆ ಈ ಕಷ್ಟವಲ್ಲ . . . ಇದಕ್ಕಿಂತಲೂ ಹೆಚ್ಚಿನ ಕಷ್ಟ ದೊರೆಯಲೇ ಬೇಕೆ"ಂದು ಆತ ಅಂದು ಶಪಿಸಿ ಬಂದಿದ್ದರೆ ಈ ಬಾರಿ "ಅಯ್ಯೊ ನನ್ನ ಮಮತೆಯ ಮಡದಿಯನ್ನು ಅನ್ಯಾಯವಾಗಿ, ಅವಿವೇಕಿಯಾಗಿ ಬಲಿ ತೆಗೆದುಕೊಂಡೆನಲ್ಲಾ" ಎಂದು ಮರುಗುತಿದ್ದನು.

ದೀರ್ಘ ಪ್ರಯಾಣ. ರೈಲಿನಲ್ಲಿ, ಬಸ್ಸಿನಲ್ಲಿ, ಪುನಃ ರೈಲಿನಲ್ಲಿ ಹೀಗೆ ಪ್ರಯಾಣ ಮಾಡಿ ರಾಮಣ್ಣನೂ ನಿಂಗನೂ ಸೋತು ಹೋಗಿದ್ದಾರೆ. ಮುಸ್ಸಂಜೆಯಾಗುವಾಗ ಅವರು ತಮ್ಮ ಹಳ್ಳಿಗೆ ಮುಟ್ಟಿದ್ದಾರೆ. ಮಂಜೇಶ್ವರದಿಂದ ತಮ್ಮ ಗಂಟು ಮೂಟೆಗಳನ್ನು ಹೊರುವುದಕ್ಕಾಗಿ ಒಬ್ಬ ಕೂಲಿಯಾಳನ್ನೂ ಸಂಗಡ ಕರೆದುಕೊಂಡಿದ್ದಾರೆ.

ಅದೇ ಬಾಕಿಮಾರು ಗದ್ದೆ, ಅದೇ ಆಲದ ಮರ, ಅದೇ ಸಾಲೆಗೆ ಹೋಗುವ ದಾರಿ, ಎಲ್ಲವೂ ಒಂದೊಂದಾಗಿ ಎದುರು ಬಂದುವು. ಒಂದೊಂದು ಸ್ಥಳವೂ ಒಂದೊಂದು ಹಿಂದಿನ ನೆನಪನ್ನು ತರುತಿದ್ದುವು. ರಾಮಣ್ಣ ಅಲ್ಲಲ್ಲಿ ಸ್ವಲ್ಪ ಸ್ವಲ್ಪ ನಿಂತು ನಿಂತು ನಿಟ್ಟುಸಿರಿಡುತ್ತಿದ್ದನು. ತನಗೆ ಮದುವೆಯಾಗುವಾಗ ಮದುವಣಗಿತ್ತಿಯನ್ನು ಪಲ್ಲಕಿಯಲ್ಲಿ ಕುಳ್ಳಿರಿಸಿಕೊಂಡು ಮೆರವಣಿಗೆಯಲ್ಲಿ ಬಂದುದು ಅದೇ ಹೆದ್ದಾರಿಯಲ್ಲಿ. ಮದುವೆಯ ಕೆಲವು ವರ್ಷಗಳ ಮೇಲೆ, ಸುಳ್ಳು ಸುದ್ದಿಗಳಿಗೆ ಮಾರುಹೋಗಿ, ಪ್ರಿಯಪತ್ನಿಯನ್ನು ಸಂಶಯ ದೃಷ್ಟಿಯಿಂದ ನೋಡಿ, ತಲೆಕೆಟ್ಟು ಹೇಡಿಯಂತೆ ಮನೆಬಿಟ್ಟು ಓಡಿದುದು ಅದೇ ಹೆದ್ದಾರಿಯಲ್ಲಿ. ಅಯ್ಯೋ! ಅದೇನು ವಿಶಾಲ ಬಯಲು? ತನ್ನ ಭವಿತವ್ಯದ ಕುರಿತು ಗಗನಗೋಪುರಗಳನ್ನು ಕಟ್ಟಿಕೊಳ್ಳುತ್ತಿದ್ದ ತನ್ನ ತಂದೆ ಮಾರಪ್ಪನ ಅಂತಿಮ ಶವ ಸಂಸ್ಕಾರ ನಡೆದುದು ಬಯಲಲ್ಲಿ! ಅದರಾಚೆ? ಅದೇ ಜಾತ್ರೆಯ ಬಯಲು! ಮಮ್ಮದೆಯ ಬಾಳೆಯ ಹಣ್ಣಿನ ಸಂತೆಯಿಟ್ಟ ಸ್ಥಳ! ಬಾರಿ ಬಾರಿಗೂ ನಿಟ್ಟುಸಿರಿಟ್ಟು, ನಡೆಯಲು ಸಾಧ್ಯವಿಲ್ಲದೆ ನಿಂತಿದ್ದ ರಾಮಣ್ಣನನ್ನು

ಸಂತೈಸಿ, ಚೇತರಿಸಿ ನಿಂಗ ಕತ್ತಲಾಗುವ ಮೊದಲು ಮನೆಮುಟ್ಟುವಂತೆ ಮಾಡಿದ.

ನೀಲಿ—ಮಾಧವ ಬೆರಗಾಗಿದ್ದಾರೆ. ಯಾರಿವರು ಆಗಂತುಕರು? ನಿಂಗ ನಾಲ್ಕು ವರ್ಷಗಳ ಮೊದಲೊಮ್ಮೆ ಬಂದು ಹೋಗಿದ್ದಾನೆ. ಅದರಿಂದ ಥಕ್ಕನೆ ಗುರುತು ಸಿಕ್ಕಿಕೊಂಡಿತು. ರಾಮಣ್ಣ? ಕಳೆದುಹೋದ ನೀಲಿಯ ಮಗ, ಮಾಧವನ ತಮ್ಮ, ಅಣ್ಣ ಮತ್ತು ತಾಯಿಯ ಎದುರು ಅಪರಾಧಿಯಂತೆ ನಿಂತಿದ್ದಾನೆ. ಎಲ್ಲರೂ ಗಟ್ಟಿಯಾಗಿ ಅಳತೊಡಗಿದರು. ನಿಂಗ ಎಲ್ಲರನ್ನೂ ಸಮಾಧಾನಗೊಳಿಸಿದ.

ಸುಸೀಲಾ ದೊಡ್ಡವಳಾಗಿದ್ದಾಳೆ. ಅವಳಿಗಿದು ಹದಿನಾರನೆಯ ವಯಸ್ಸು. ರಾಮಣ್ಣ ಮನೆ ಬಿಟ್ಟು ಹೋಗುವಾಗ ಸುಸೀಲಾ ಎರಡು ವರ್ಷದ ಮಗು. ಅಂಗಿ ತರಲಿಲ್ಲವೆಂದು ಹಟ ಹಿಡಿದು ನೆಲದಲ್ಲಿ ಮಲಗಿಕೊಂಡ ಮಗು. ರಾಮಣ್ಣನೀಗ ಆಕೆಗೂ ಹೊಸಬನಾಗಿದ್ದಾನೆ. ನೀಲಿ ಹೇಳಿದ ಮೇಲೆ ಸುಸೀಲಾ ಬಂದು ತಂದೆಯ ಕಾಲು ಹಿಡಿದು ಪ್ರಣಾಮ ಮಾಡಿದಳು.

ರಾಮಣ್ಣ ಬಂದ ಒಂದೆರಡು ದಿನಗಳಲ್ಲಿಯೇ ಬೀಡಿಗೆ ಹೋಗಿ ಧನಿಯವರನ್ನು ಕಂಡು ತನ್ನಿಂದಾದ ಎಲ್ಲಾ ಅಪರಾಧಗಳನ್ನು ಕ್ಷಮಿಸಬೇಕೆಂದು ಬೇಡಿಕೊಂಡನು. ಚಂದ್ರಮತಿಯಿಂದ ಆತನಿಗೆ ಎಲ್ಲಾ ವೃತ್ತಾಂತಗಳೂ ದೊರೆತುವು.

ರಾಮಣ್ಣನ ಹೊಲದ ಗೆಳೆಯರಲ್ಲಿ ಉಳಿದಿರುವವನೆಂದರೆ ಸುಬ್ಬ ಮಾತ್ರ. ತಿಮ್ಮನೂ ಬಟ್ಯನೂ ಇಬ್ಬರೂ ತೀರಿಹೋಗಿದ್ದರು.

ರಾಮಣ್ಣ ಮತ್ತು ನಿಂಗ ಬಂದು ಈಗ ಹದಿನೈದು ದಿನ ಕಳೆದು ಹೋದರೂ ಆ ಸುದ್ದಿ ಇನ್ನೂ ಮುಗಿದಿರಲಿಲ್ಲ. ರಾಮಣ್ಣ ಬೊಂಬಾಯಿಯಲ್ಲಿ ಸಂಪಾದಿಸಿದ ಹಣ, ನಿಂಗನು ಗಳಿಸಿದ ವಿದ್ಯೆ ಮತ್ತು ನೌಕರಿ ಇದರ ಕುರಿತು ಮಾತೇ ಮಾತು. ಇದರೊಡನೆ ಇನ್ನೊಂದು ಸುದ್ದಿಯೂ ಅಲ್ಲಲ್ಲಿ ಕೇಳಿಸುತಿತ್ತು. ನಿಂಗನಿಗೆ ರಾಮಣ್ಣನ ಮಗಳು ಸುಸೀಲಾಳನ್ನು ವಿವಾಹವಾಗುವುದಂತೆ ಎಂದು. ಸುದ್ದಿ ಸುಳ್ಳಲ್ಲ. ಸತ್ಯವೇ ಆಗಿತ್ತು. ಮುಂಬಯಿಯಿಂದ ಹೊರಡುವಾಗ ಮಾಧವ ಭಟ್ಟರೂ ರಾಮಣ್ಣನ ಕಿವಿಯಲ್ಲಿ ಇದರ ಕುರಿತು ಏನೋ ಹೇಳಿದ್ದರು. ತಾಯಿ ನೀಲಿಯೂ ಅಣ್ಣ ಮಾಧವನೂ ರಾಮನಿಗೆ ಆಗಾಗ ನೆನಪು ಹುಟ್ಟಿಸುತಿದ್ದರು. ಆದರೆ ರಾಮನ ಪರಿತಾಪ ಅವನಿಗೇ

ಗೊತ್ತು. ರಾತ್ರೆ ಒಂಟಿಯಾಗಿ ಮಲಗಿಕೊಂಡು, ನಾಗಿಯೊಡನೆ ಹಿಂದೆ ಕಳೆದ ಸವಿ ನೆನಪುಗಳನ್ನು ಮನಸ್ಸಿಗೆ ತಂದುಕೊಂಡು ಆತ ಕಣ್ಣೀರಿನ ಕೋಡಿ ಹರಿಸುತ್ತಿದ್ದ. ಕಟ್ಟಕಡೆಗೆ ತನ್ನ ಮನೆಯವರ ಮತ್ತು ತನ್ನ ಅಭಿಪ್ರಾಯ ವನ್ನು ನಿಂಗನ ಮುಂದಿಟ್ಟ.

ಚೆಲುವೆ ಸುಶೀಲಾ ಇಷ್ಟರಲ್ಲೇ ನಿಂಗನ ಕಣ್ಣಿಗೆ ಬಣ್ಣದ ನವಿಲಾಗಿ ಹೋಗಿದ್ದಳು. ಸುಶೀಲಳ ಎಳೆ ಹರೆಯದ, ನಿರ್ಮಲ ಸೌಂದರ್ಯಕ್ಕೆ ನಿಂಗ ಮನಸೋತಿದ್ದನು. ತನ್ನ ಒಪ್ಪಿಗೆಯನ್ನು ನಿಂಗ ಕೊಟ್ಟುಬಿಟ್ಟ.

ತಾನು ಸಂಪಾದಿಸಿದ ಸಂಪತ್ತಿಗೆಲ್ಲಾ ತನ್ನ ಒಬ್ಬಳೇ ಒಬ್ಬಳಾದ ಮಗಳು ಸುಶೀಲಾ ಹಕ್ಕುದಾರಳು. ಮದುವೆಯನ್ನು ರಾಮಣ್ಣ ಬಹಳ ಸಂಭ್ರಮ ದಿಂದಲೇ ಜರಗಿಸಿದ. ತನ್ನ ಹಿಂದಿನ ಪರಿಚಯದವರಿಗೆಲ್ಲಾ ಅಚ್ಚು ಹಾಕಿಸಿದ ಆಮಂತ್ರಣ ಪತ್ರಿಕೆಗಳನ್ನು ಕಳುಹಿಸಿದ. ತನ್ನ ಹಿಂದಿನ ಶಾಲೆಯ ಮುಖ್ಯೋ ಪಾಧ್ಯಾಯರ ಕುರಿತು ವಿಚಾರಿಸಿದ. ಅವರಿನ್ನೂ ಕಣ್ಣಾನ್ನೂರಿನಲ್ಲೇ ತನ್ನ ಮಗನ ಮನೆಹತ್ತಿರ ಒಂದು ಮನೆಯಲ್ಲಿ ವಾಸಿಸುತಿದ್ದಾರೆ. ಎಪ್ಪತ್ತೆರಡು ವರ್ಷದ ಹಣ್ಣು ಮುದುಕರಾಗಿದ್ದಾರೆ ಎಂದೆಲ್ಲಾ ಶಾಲೆಯ ಡ್ರಿಲ್ ಮಾಸ್ತರರ ಮೂಲಕ ವಿವರ ತಿಳಿಯಿತು. ಒಡನೆಯೇ ರಾಮಣ್ಣ ಒಂದು ಆಮಂತ್ರಣ ಪತ್ರಿಕೆಯನ್ನೂ ಅದರ ಜತೆಗೆ ಒಂದು ವೈಯಕ್ತಿಕ ಪತ್ರವನ್ನೂ ಬರೆದು ಕಳುಹಿಸಿದ.

ಮದುವೆ ಬಹಳ ಸಂಭ್ರಮದಿಂದ ಜರಗಿತು. ಇಂತಹ ಒಂದು ಮದುವೆ ಈ ಊರಿನಲ್ಲೆ ಇಷ್ಟರ ತನಕ ಜರಗಲಿಲ್ಲವೆಂದು ಸಭೆಯಲ್ಲಿ ಯಾರೋ ಹೇಳಿ ಕೊಂಡರು. ಮದುವೆಗೆ ರಾಮಣ್ಣನ ಡ್ರಿಲ್ ಮಾಸ್ತರರೂ ಹಾಜರಿದ್ದರು. ಅವರೂ ಪಾಪ ಮುದುಕರಾಗಿ ಹೋಗಿದ್ದಾರೆ. ಮದುವೆ ಮುಗಿದು ಹೋಗು ವಾಗ ರಾಮಣ್ಣನ ಕೈಕುಲುಕಿ Thank you Mr. Ramanna for your daughter's marriage! "ಥೇಂಕ್ ಯುು ಮಿಸ್ಟರ್ ರಾಮಣ್ಣ ಫೋರ್ ಯುುವರ್ ಡೋಟರ್ಸ್ ಮೇರೇಜ್" ಎಂದು ಹೇಳಿ ಹೊರಟು ಹೋದರು. ಮಮ್ಮದೆ ಬ್ಯಾರಿ, ಮದುವೆ ಮುಗಿದು ಮನೆಗೆ ಹೋಗಿ ಹೆಂಡತಿ ಬೀಪಾತುಮ್ಮನೊಡನೆ "ಆ ನಾಗಿ ಅಮ್ಮ ಇರುತಿದ್ದರೆ ಪಾಪ ಎಷ್ಟು ಹಿಗ್ಗು ತ್ತಿತ್ತೋ ಅದು?" ಎಂದು ಹೇಳಿದ ಬೆನ್ನಿಗೇ "ಅದು ಹೋಗಲಿ. ನಮ್ಮ ನಿಂಗ ಹುಡುಗ ಇಷ್ಟು ದೊಡ್ಡ ಜನ ಆದಾನೆಂದು ಯಾರೂ ನೆನಸಿರಲಿಕ್ಕಿಲ್ಲ. ಅವ

ನಿಗೆ ತಿಂಗಳಿಗೆ ಮುನ್ನೂರು ರೂಪಾಯಿ ಸಂಬಳವಿದೆಯಂತೆ" ಎಂದು ಸುದ್ದಿ ತೆಗೆಯುತಿದ್ದ.

ಮದುವೆ ಮುಗಿದು ಇನ್ನೂ ಒಂದು ದಿನ ಕಳೆದಿಲ್ಲ. ರಾಮಣ್ಣನಿಗೆ ಒಂದು ಟೆಲಿಗ್ರಾಮ್ ಬಂದು ಕಾಯುತಿತ್ತು. ಬಿಚ್ಚಿ ನೋಡಿದರೆ ಅದು ಕಣ್ಣಾನ್ನೂರಿನಲ್ಲಿರುವ ತನ್ನ ಹಿಂದಿನ ಮುಖ್ಯೋಪಾಧ್ಯಾಯರಿಂದ ಬಂದಿತ್ತು. ಮದುವೆಯ ಆಹ್ವಾನ ಪತ್ರಿಕೆಯ ಜತೆಗೆ ಬರೆದ ವೈಯಕ್ತಿಕ ಪತ್ರದಲ್ಲಿ ರಾಮಣ್ಣ ತನ್ನ ಜೀವನದ ಕರುಣಕತೆಯನ್ನೆಲ್ಲಾ ಅವರಿಗೆ ಬರೆದು ತಿಳಿಸಿದ್ದ. ಎಲ್ಲಕ್ಕಿಂತಲೂ ಹೆಚ್ಚಾಗಿ ತನ್ನ ನಿರಪರಾಧಿನಿ ಪತ್ನಿಯನ್ನು ನಿಷ್ಕಾರಣವಾಗಿ ಕೊಲ್ಲಿಸಿದ ಪಾಪಿ ತಾನೆಂತಲೂ ತನ್ನನ್ನು ಶಪಿಸಿಕೊಂಡಿದ್ದ. ಮದುವೆ ಮುಗಿದೊಡನೆ ಊರಿನಲ್ಲಿ ಹೆಚ್ಚುದಿನ ಇರಬಯಸುವುದಿಲ್ಲವೆಂದೂ, ಮಗಳನ್ನೂ ಅಳಿಯನನ್ನೂ, ತಾಯಿಯನ್ನೂ, ಅಣ್ಣನನ್ನೂ ಕರೆದುಕೊಂಡು ಮುಂಬಯಿಗೆ ಹೋಗುವವನಿದ್ದೇನೆಂದೂ ಬರೆದಿದ್ದನು. ಪತ್ರದ ಕೊನೆಗೆ ತಾನೀಗ ಆರ್ಥಿಕ ಪರಿಸ್ಥಿತಿಯಲ್ಲಿ ತುಂಬಾ ಉತ್ತಮ ಸ್ಥಿತಿಯಲ್ಲಿರುವೆನೆಂದೂ, ಮುಖ್ಯೋಪಾಧ್ಯಾಯರಿಗೆ ಏನಾದರೂ ಕಷ್ಟವಿರುವುದಾದರೆ ತನ್ನನ್ನು ಮಗನೆಂದೇ ಭಾವಿಸಿಕೊಂಡು ನಿರ್ದಾಕ್ಷಿಣ್ಯವಾಗಿ ಬರೆಯಬೇಕೆಂದೂ ವಿನಂತಿ ಮಾಡಿಕೊಂಡಿದ್ದನು. ಮುಖ್ಯೋಪಾಧ್ಯಾಯರ ತಂತಿಯನ್ನು ರಾಮಣ್ಣ ಓದುವುದಕ್ಕಾಗಿ ನಿಂಗನ ಕೈಗಿತ್ತನು. ತಂತಿಯ ಅಭಿಪ್ರಾಯವಿಷ್ಟೆ. "ನೀವೆಲ್ಲರೂ ಬೊಂಬಾಯಿಗೆ ಹೋಗುವಾಗ ಇದೇ ದಾರಿಯಲ್ಲಿ ಹೋಗಬಹುದು. ಇಲ್ಲಿ ಒಂದು ದಿನ ಇಳಿದು ಇದ್ದು ಹೋಗಬೇಕು. ತಪ್ಪಬಾರದು. ನನ್ನ ಮೇಲೆ ಪ್ರೀತಿ ನಿನಗಿರುವುದಾದರೆ ಬರಲು ತಪ್ಪಬಾರದು."

ಮುಖ್ಯೋಪಾಧ್ಯಾಯರಿಂದ ಈ ರೀತಿಯ ತಂತಿ ಬಂದ ನಂತರ ಕಣ್ಣಾನ್ನೂರಿಗೆ ಹೋಗದೆ ವಿಧಿಯಿಲ್ಲ. ಎಲ್ಲರಿಗೂ ಬೊಂಬಾಯಿಗೆ ಹೋಗುವ ಹುರುಪಿದ್ದರೂ ಮುದುಕಿ ನೀಲಿಗೆ ಮಾತ್ರ ಹುಟ್ಟಿದೂರನ್ನು ಬಿಟ್ಟು ಹೊರಡಲು ಮೊದಲು ಕಾಲೇ ಬರಲಿಲ್ಲ. ಬೀಡಿನಿಂದ ತೊಡಗಿ ಬೇಕುಬೇಕಾಗುವ ಎಲ್ಲಾ ಮನೆಯವರಲ್ಲಿಯೂ ಹೇಳಿ ಹೊರಟರು.

---

## 25

ಮುಖ್ಯೋಪಾಧ್ಯಾಯ ಶ್ಯಾಮರಾಯರು ಈಗ ಹಣ್ಣು ಮುದುಕ. ಅವರ ದೀರ್ಘಕಾಲದ ಕೆಲಸದಲ್ಲಿ ಜಾಗ್ರತೆಯಾಗಿ ಉಳಿಸಿದ ಉಳಿಕೆ ಹಣ ಅವರ ಜೀವನಕ್ಕೆ ಸಾಕಾಗುತಿತ್ತು. ತನ್ನ ಮಗ ತನ್ನ ಮನೆಯಲ್ಲಿಯೇ ಇರಬೇಕೆಂದು ಎಷ್ಟು ಕಾಡಿದರೂ ಅವರು ಮಗನ ಮನೆಯ ಹಿತ್ತಲಿನಲ್ಲೇ ಇನ್ನೊಂದು ಸಣ್ಣ ಮನೆಯಲ್ಲಿದ್ದಾರೆ. ಮನೆಯಲ್ಲಿ ಅವರು, ಅವರ ಹೆಂಡತಿ ಮತ್ತು ಕೆಲಸದ ಹೆಂಗಸು ಇಷ್ಟೆ ಮಂದಿಯ ಚಿಕ್ಕ ಸಂಸಾರವದು.

ಇತ್ತೀಚೆಗೆ ನಾಲ್ಕಾರು ದಿನಗಳಿಂದ ಶ್ಯಾಮರಾಯರ ಮನಸ್ಸಿಗೆ ನೆಮ್ಮದಿಯೇ ಇಲ್ಲ. ಅವರು ನಿಂತಲ್ಲಿ ನಿಲ್ಲಲಾರರು. ಮಲಗಿದರೆ ನಿದ್ದೆ ಹತ್ತಲೊಲ್ಲದು. ಹುಚ್ಚನಂತೆ ಯಾವಾಗಲೂ ಯೋಚನೆಯಲ್ಲೇ ಮಗ್ನರಾಗಿರುತ್ತಾರೆ.

ಅದಕ್ಕೆ ಕಾರಣವೂ ಇಲ್ಲದೆ ಇರಲಿಲ್ಲ. ಅವರ ಕೆಲಸದ ಹೆಂಗಸು ಈಗ ಕೆಲವು ದಿನಗಳಿಂದ ವಿಚಿತ್ರ ರೀತಿಯಲ್ಲಿ ವರ್ತಿಸುತಿದ್ದಾಳೆ. ರಾಮಣ್ಣನ ಮಗಳ ಮದುವೆಯ ಆಹ್ವಾನ ಪತ್ರಿಕೆಯನ್ನೂ ರಾಮಣ್ಣ ಬರೆದ ವೈಯಕ್ತಿಕ ಪತ್ರವನ್ನೂ ತನ್ನ ಹೆಂಡತಿಗೆ ಓದಿ ಹೇಳುವಾಗ ಕೆಲಸದ ಹೆಂಗಸು ಹುಚ್ಚಿಯಂತೆ ದೀರ್ಘವಾದ ನಿಟ್ಟುಸಿರಿಡುತ್ತಾ ಒಮ್ಮೆ ಮೂರ್ಛೆಹೋಗಿ ಪ್ರಜ್ಞೆ ಇಲ್ಲದವಳಾದಳು. ಅನಂತರ ಅದೇ ಆಹ್ವಾನ ಪತ್ರವನ್ನು ಎದೆಗೆ ಅಪ್ಪಿ ಹಿಡಿದು ಅಳುತ್ತಾ ಆಗಾಗ ಮೂರ್ಛೆಹೋಗುತಿದ್ದಾಳೆ. ಕಾರಣವೇನೆಂದು ಎಷ್ಟು ಬಾರಿ ಎಷ್ಟು ವಿಧವಾಗಿ ಕೇಳಿದರೂ ಬಾಯಿ ಬಿಡಲಾರಳು. ಹದಿಮೂರು ಹದಿನಾಲ್ಕು ವರ್ಷಗಳ ಹಿಂದೆ ರೈಲಿನಲ್ಲಿ ಬರುವಾಗ "ನಿಮ್ಮ ಮನೆಯಲ್ಲಿ ಕೆಲಸವೇನಾದರೂ ಇದ್ದರೆ ಮಾಡುವೆನು" ಎಂದು ಹೇಳಿದ ಈ ಹೆಂಗಸನ್ನು ತಂದು ಮನೆಯಲ್ಲಿ ಕೆಲಸಕ್ಕೆ ಶ್ಯಾಮರಾಯರು ನಿಲ್ಲಿಸಿದ್ದರು. ಆಕೆಯ ಗುಣಾತಿಶಯವನ್ನು ನೋಡಿ ಮನೆಯವರಂತೆ ನೋಡುತಿದ್ದರು. ಇದರಲ್ಲೇನೋ ರಹಸ್ಯವಿದ್ದೇ ಇರಬೇಕೆಂದು ಯೋಚಿಸಿಯೇ ಶ್ಯಾಮರಾಯರು ರಾಮಣ್ಣನಿಗೆ ತಂತಿ ಬಿಟ್ಟಿದ್ದು.

ರಾಮಣ್ಣ, ನೀಲಿ, ಮಾಧವ, ನಿಂಗ, ಸುಸೀಲಾರು ಕಣ್ಣಾನ್ನೂರಿನಲ್ಲಿಳಿದು, ನೇರಾಗಿ ಶ್ಯಾಮರಾಯರ ಮನೆಗೇ ಬಂದು, ಪ್ರವೇಶಿಸಿದರು. ಅಡಿಗೆಯ ಹೆಂಗಸು ಹುಚ್ಚಿಯಂತೆ ಕೆದರಿದ ಕೇಶರಾಶಿಯನ್ನು ಬಿಟ್ಟುಕೊಂಡು, ಸುಸೀಲಾಳನ್ನು ಹಿಡಿದು ಎದೆಗೆ ಅಪ್ಪಿಕೊಂಡಳು. ಎಲ್ಲರಿಗೂ ಆಶ್ಚರ್ಯವಾಯಿತು.

ಅರೆತಾಸು ಕಳೆದು, "ನಿಮಗೆಲ್ಲರಿಗೂ ಬೇಡವಾದ ನಾಗಿ ನಾನು," ಎಂದು ನುಡಿದಾಗ ರಾಮಣ್ಣ, ಇದು ಕನಸೋ, ಭ್ರಮೆಯೋ ಎಂದು ತಿಳಿಯದಾದ. ಸತ್ತ ನಾಗಿ ಬದುಕಿರಬಹುದೇ?

ಶ್ಯಾಮರಾಯರಿಗೆ ಎಲ್ಲವೂ ಅರ್ಥವಾಯಿತು. ನಾಗಿ ಯಾವುದನ್ನೂ ಅವರಲ್ಲಿ ಹೇಳಿರಲಿಲ್ಲ. ನಾಗಿಯ ಕುರಿತು ಅವಳ ಬಾಯಿಂದಲೇ ಅದನು ಕೇಳುವ ಕುತೂಹಲವಿತ್ತು ಅವರಲ್ಲಿ. ಆದರೆ ಅವಸರ ಮಾಡಬಾರದೆಂದು ತಿಳಿದು ಅತಿಥಿಗಳಾಗಿ ಬಂದ ಅವರೆಲ್ಲರನ್ನೂ ಸತ್ಕರಿಸಿದರು.

ರಾತ್ರೆ ಊಟವಾಗಿ ಎಲ್ಲರೂ ಕೊಂಚ ಕುಳಿತರು. ರಾಮಣ್ಣ ಮುಖ್ಯೋಪಾಧ್ಯಾಯರಿಗೆ ಬರೆದ ಪತ್ರವನ್ನು ನಾಗಿ ಸಂಪೂರ್ಣ ಓದಿದ್ದಾಳೆ. ತಾನು ನಿರಪರಾಧಿನಿಯೆಂದು ಇಡೀ ಊರೇ ಹೇಳುತ್ತಿದೆಯೆಂದೂ, ತನ್ನ ಮೇಲೆ ಸಂಶಯತಾಳಿದುದಕ್ಕಾಗಿ ಈಗ ರಾಮಣ್ಣನೆಷ್ಟು ನೊಂದಿರುವನೆಂದೂ ಆಕೆ ತಿಳಿದಿದ್ದಳು.

ತಾನು ಬದುಕಬಾರದಿತ್ತು ಎಂದು ಹಲವಾರು ಬಾರಿ ಆಕೆಗೆ ಕಾಣಿಸುತಿದ್ದುದು ನಿಜ. ಆದರೆ ಹಾಗೆ ಆಕೆ ಮಾಡಿದ್ದರೆ, ಇಂತಹ ಸಮಾಗವು ದುರ್ಲಭವಿತ್ತು. ಎಲ್ಲರಿಂದಲೂ ತಿರಸ್ಕರಿಸಲ್ಪಟ್ಟ ನಾಗಿ, ಆತ್ಮಹತ್ಯೆಮಾಡಲು ಸಮುದ್ರಕ್ಕೆ ಹೋದುದೂ ನಿಜ; ಭೂದೇವಿಗೆ ಅಂತಿಮ ಪ್ರಣಾಮಮಾಡಿ, ನೀರಿಗೆ ಧುಮುಕಿದುದೂ ನಿಜವಾಗಿತ್ತು. ನಾಗಿ ನೀರಿಗೆ ಧುಮುಕಿದೊಡನೆ ಒಂದು ತೆರೆ ಆಕೆಯನ್ನೆತ್ತಿಕೊಂಡು ದೂರ ಹೋಗುತ್ತಿದ್ದಾಗಲೇ, ಎದುರಿನಿಂದ ಇನ್ನೊಂದು ತೆರೆ ಪ್ರತಿಭಟಿಸಿ, ಆಕೆಯನ್ನು ಪುನಃ ಮರಳದಿಣ್ಣೆಯ ಮೇಲೆ ತಂದೆಸಗಿತು. ಇನ್ನೊಮ್ಮೆ ಹಾರುವೆನೆಂದು ಎದ್ದಳು. "ಭಯಂಕರವಾದ ಸಮುದ್ರ, ತೆರೆಗಳು ಭೋರ್ಗರೆಯುತ್ತಿವೆ; ನಾನು ಈ ರೀತಿ ನೀರಿಗೆ ಧುಮುಕುವುದು ಸರಿಯಲ್ಲವೆಂದೋ, ಏನೋ, ಪುನಃ ಮರಳದಿಣ್ಣೆಗೆ ಬಿಸುಡಲ್ಪಟ್ಟೆ. ಇನ್ನೊಮ್ಮೆ ಹಾರುವುದಿಲ್ಲ; ಎಲ್ಲಿಯಾದರೂ ಊರುಬಿಟ್ಟು ದೂರ ಹೋಗುವೆನು" ಎಂದು ನಿರ್ಧರಿಸಿ, ನಾಗಿ, ರಾತ್ರಿಯೇ ಮರಳದಿಣ್ಣೆಯಲ್ಲೇ ದಕ್ಷಿಣಾಭಿಮುಖವಾಗಿ ಹೋಗಿ, ರೈಲ್ವೆನಿಲ್ದಾಣ ಮುಟ್ಟಿದಳು. ಟಿಕೇಟು ತೆಗೆಯಲು ಚಿಕ್ಕಾಸೂ ಆಕೆಯಲ್ಲಿರಲಿಲ್ಲ; ಆದರೂ ಹತ್ತಿದಳು. ಅದೇ ಬಂಡಿ ಕಣ್ಣಾನ್ನೂರು ಹತ್ತಿರ ಮುಟ್ಟುವಾಗ, ಶ್ಯಾಮರಾಯರು ಹತ್ತಿಕೊಂಡರು. ಮುದುಕಿಯೊಬ್ಬಳು ರೈಲು ಹತ್ತಲು ಸಾಧ್ಯವಾಗದೆ ಅತ್ತಿತ್ತ ನೋಡುತ್ತಿರು

ವಾಗ, ಶ್ಯಾಮರಾಯರು ಆಕೆಯಲ್ಲಿ ಕನಿಕರಮೂಡಿ, ಕೂಡಲೇ ಆ ಮುದುಕಿಯನ್ನು ಎತ್ತಿ, ರೈಲಿಗೆ ಹತ್ತಿಸುವುದನ್ನು ನಾಗಿ ನೋಡಿದಳು. ಈ ಮಹಾನುಭಾವರು ದಯಾಮೂರ್ತಿಗಳು, ಪರರ ಸಂಕಷ್ಟವನ್ನು ಅರಿತವರು, ಎಂದು ತಿಳಿದು, ಅವರೊಡನೆ ಕೆಲಸವೇನಾದರೂ ದೊರೆಯುಬಹುದೇ ಎಂದು ಆಕೆ ಅಪೇಕ್ಷಿಸಿದುದು. ಶ್ಯಾಮರಾಯರಿಗೆ, ಈಕೆ ರಾಮಣ್ಣನ ಪತ್ನಿಯಾಗಿರಬಹುದೆಂದೂ, ನಾಗಿಗೆ, ಈ ಮಹಾನುಭಾವರು ತನ್ನ ಪತಿಯ ಮುಖ್ಯೋಪಾಧ್ಯಾಯರು ಎಂದೂ ಹೇಗೆ ತಿಳಿಯಬೇಕು?

ಮುಖ್ಯೋಪಾಧ್ಯಾಯರಿಗೆ ಬಹಳ ಸಂತೋಷ. ಈ ಸಂತೋಷ ಸಮಾಗಮ ತನ್ನ ಮನೆಯಲ್ಲಾದುದು ಎನ್ನುವುದಕ್ಕಿಂತ ಹೆಚ್ಚಿನ ಸಂತೋಷ ಇನ್ನಾವುದು? ಎರಡು ದಿವಸ ಅವರನ್ನು ಮನೆಯಲ್ಲಿಯೇ ಇರಿಸಿಕೊಂಡರು.

ಕಣ್ಣಾನೂರಿನಿಂದಲೇ ನೇರಾಗಿ ಮುಂಬಾಯಿಗೆ ಹೋಗುವುದೆಂದು ರಾಮಣ್ಣ-ನಿಂಗರು ಸೂಚಿಸಿದರೂ, ನಾಗಿಯ ಅಪೇಕ್ಷೆ, ಊರಿಗೆ ಹೋಗಿ ಚಂದ್ರಮತಿಯನ್ನು ನೋಡಿ, ಅನಂತರ ಮುಂಬಯಿಗೆ ಹೋಗಬೇಕೆಂದಿತ್ತು. ನಾಗಿಯ ಅಪೇಕ್ಷೆಯನ್ನು ಯಾರೂ ತಿರಸ್ಕರಿಸಲಿಲ್ಲ. ಎಲ್ಲರೂ ಊರಿನ ಕಡೆಗೆ ಹೋಗುವುದಕ್ಕಾಗಿ ರೈಲು ಹತ್ತಿದರು.





**ಶ್ರೀ ಕೆ. ಮಹಾಬಲ ಭಂಡಾರಿ, ಎಂ. ಎ., ಎಲ್. ಎಲ್. ಬಿ.**

●

ಶ್ರೀ ಭಂಡಾರಿಯವರು ದಕ್ಷಿಣ ಕನ್ನಡದ ಕಾಸರಗೋಡಿನ ಉತ್ಸಾಹೀ ತರುಣ ವಕೀಲರು. ವಿದ್ಯಾರ್ಥಿಯಾಗಿದ್ದಾಗಲೇ ಕನ್ನಡ ಸಾಹಿತ್ಯ ಚಟುವಟಿಕೆಗಳಲ್ಲಿ ವಿಶೇಷ ಆಸಕ್ತಿಯಿಂದ ಭಾಗ ಸುತ್ತಿದ್ದರು. ಮಂಗಳೂರಿನ ಸೈಂಟ್ ಎಲೋಶಿಯಸ್ ಕಾಲೇಜಿನ ಮತ್ತು ಬೆಳಗಾವಿಯ ರಾಜಾ ಲಖ್ಖಮಗೌಡ ಲಾ ಕಾಲೇಜಿನ ಕರ್ನಾಟಕ ಸಂಘಗಳ ಕಾರ್ಯದರ್ಶಿಗಳಾಗಿದ್ದರು. ಕರ್ನಾಟಕದ ಅನೇಕ ಪತ್ರಿಕೆಗಳಲ್ಲಿ ಆಗಾಗ ಲೇಖನಗಳನ್ನು ಬರೆದಿದ್ದಾರೆ. ಶ್ರೀ ಭಂಡಾರಿಯವರು ಉತ್ತಮ ವಾಗ್ಮಿಗಳೂ ಆಗಿದ್ದಾರೆ. ಜೀವನದಲ್ಲಿ ಪ್ರಗತಿಶೀಲ ಮನೋವೃತ್ತಿಯವರು. ಶ್ರೀಯುತರ ಲೇಖನಿಯಿಂದ ಇನ್ನೂ ಹಲವಾರು ಹೊತ್ತಗೆಗಳು ಹೊರಬರಲೆಂದು ಹಾರೈಸುತ್ತೇವೆ.